KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಜುಲೈ ೨, ೨೦೦೯ (ಆಷಾಢ ೧೧, ಶಕ ವರ್ಷ ೧೯೩೧) | ಸಂಚಿಕೆ ೨೭ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಎಸ್‌ಜಿಎಸ್‌ವೈ ಲೆಕ್ಕ ಶೀರ್ಷಿಕೆ 2501–01–198–6–01 ಯಡಿ ಅನುದಾನವನ್ನು ಪುನರ್ವಿನಿಯೋಗದ ಮೂಲಕ ಭರಿಸುವ ಬಗ್ಗೆ.

**ಓದಲಾಗಿದೆ:**
1 ಸರ್ಕಾರದ ಆದೇಶದ ಸಂಖ್ಯೆ ಎಫ್‌ಡಿ 9 ಟಿಎಫ್‌ಪಿ 2005 ದಿನಾಂಕ: 07.04.2005.
2 ಸರ್ಕಾರದ ಆದೇಶದ ಸಮಸಂಖ್ಯೆ ದಿನಾಂಕ 03.03.2009
3 ಸರ್ಕಾರದ ಆದೇಶದ ಸಮಸಂಖ್ಯೆ ದಿನಾಂಕ 11.03.2009
4 ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ ಜೆ 12022/1/2008 ಎಸ್‌ಜಿಎಸ್‌ವೈ I (226) ದಿನಾಂಕ 12.03.2009

**ಪ್ರಸ್ತಾವನೆ:**

ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯ ಲೆಕ್ಕ ಶೀರ್ಷಿಕೆ 2501–01–198–6–01 ಯಡಿ 2008–2009ನೇ ಸಾಲಿಗೆ ರಾಜ್ಯದ ಆಯವ್ಯಯದಲ್ಲಿ ರಾಜ್ಯದ ಪಾಲಿನ ಅನುದಾನ ರೂ.2562.39 ಲಕ್ಷಗಳನ್ನು ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತಿಗಳಿಗೆ ಹಂಚಿಕೆ ಮಾಡಿದೆ. ಈ ಯೋಜನೆಯು ಕೇಂದ್ರ ಪುರಸ್ಕೃತ ಯೋಜನೆಯಾಗಿರುವುದರಿಂದ ರಾಜ್ಯವು ಕೇಂದ್ರದ ಪಾಲಿನ ಅನುದಾನಕ್ಕನುಗುಣವಾಗಿ ರಾಜ್ಯದ ಪಾಲಿನ ಅನುದಾನ ಬಿಡುಗಡೆ ಮಾಡಬೇಕಾಗಿದೆ. ಓದಲಾಗಿದೆ (2) ರ ಆದೇಶದಲ್ಲಿ ಬಾಗಲಕೋಟೆ, ಬೆಂಗಳೂರು ಗ್ರಾಮಾಂತರ, ಚಿಕ್ಕಬಳ್ಳಾಪುರ, ಚಾಮರಾಜನಗರ, ದಕ್ಷಿಣ ಕನ್ನಡ ಮತ್ತು ರಾಮನಗರ ಜಿಲ್ಲಾ ಪಂಚಾಯತ್‌ಗಳಿಗೆ ಕೊರತೆಯಾಗಿರುವ ರೂ.1,32,34,000 ಅನುದಾನವನ್ನು ಪುನರ್ವಿನಿಯೋಗ ಮಾಡಿಕೊಂಡು ಓದಲಾಗಿದೆ (3)ರ ಆದೇಶದಲ್ಲಿ ಅನುದಾನ ರೂ.1,36,60,000 ಬಿಡುಗಡೆ ಮಾಡಲಾಗಿತ್ತು. ಎರಡನೇ ಕಂತಿನ ಅನುದಾನವಾಗಿ ಕೇಂದ್ರ ಸರ್ಕಾರ ಓದಲಾಗಿದೆ (4) ರಲ್ಲಿ ಕೋಲಾರ ಜಿಲ್ಲಾ ಪಂಚಾಯತಿಗೆ ರೂ. 33,46,000 ಹಾಗೂ ರಾಮನಗರ ಜಿಲ್ಲಾ ಪಂಚಾಯತಿಗೆ ರೂ.93,47,000 ಬಿಡುಗಡೆ ಮಾಡಿದೆ. ಕೇಂದ್ರ ಬಿಡುಗಡೆಗೊಳಿಸಿದ ಅನುದಾನಕ್ಕೆ ಅನುಗುಣವಾಗಿ, ಈ ಜಿಲ್ಲೆಗಳಿಗೆ ಕ್ರಮವಾಗಿ ರಾಜ್ಯದ ಪಾಲಿನ ಅನುದಾನ ರೂ.11,15,000 ಹಾಗೂ 31,16,000 ಬಿಡುಗಡೆ ಮಾಡಬೇಕಾಗಿದೆ. ಆದರೆ, ರಾಜ್ಯದ ಆಯವ್ಯಯದಲ್ಲಿ ಕೋಲಾರ ಜಿಲ್ಲಾ ಪಂಚಾಯತಿಗೆ ರೂ.6,79,000 ಮಾತ್ರ ಲಭ್ಯತೆ ಇದ್ದು, ಮತ್ತು ರಾಮನಗರ ಜಿಲ್ಲಾ ಪಂಚಾಯತಿಯಲ್ಲಿ ಅನುದಾನ ಲಭ್ಯತೆ ಇರುವುದಿಲ್ಲ. ಆದ ಕಾರಣ, ಕೋಲಾರ ಮತ್ತು ರಾಮನಗರ ಜಿಲ್ಲಾ ಪಂಚಾಯತಿಗಳಲ್ಲಿ ಕೊರತೆಯಿರುವ ರೂ.35,52,000 ಗಳನ್ನು ಚಿಕ್ಕಮಗಳೂರು ಹಾಗೂ ಉತ್ತರ ಕನ್ನಡ ಜಿಲ್ಲೆಗಳಲ್ಲಿ ಉಳಿಯಬಹುದಾದ ಅನುದಾನದಿಂದ ಪುನರ್ವಿನಿಯೋಗ ಮಾಡಿಕೊಳ್ಳಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 65 ಎಸ್‌ಜಿವೈ 2008, ಬೆಂಗಳೂರು, ದಿನಾಂಕ: 19ನೇ ಮಾರ್ಚ್ 2009**

ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯ ಲೆಕ್ಕ ಶೀರ್ಷಿಕೆ 2501–01–198–6–01 ಯಡಿ 2008–2009ನೇ ಸಾಲಿಗೆ ರಾಜ್ಯ ಸರ್ಕಾರವು ಕೋಲಾರ ಮತ್ತು ರಾಮನಗರ ಜಿಲ್ಲಾ ಪಂಚಾಯತ್‌ಗೆ ಅಗತ್ಯವಿರುವ ರೂ.35,52,000ಗಳನ್ನು (ರೂ. ಮೂವತ್ತೈದು ಲಕ್ಷದ ಐವತ್ತೆರಡು ಸಾವಿರ ಮಾತ್ರ) ಪುನರ್ವಿನಿಯೋಗದ ಮೂಲಕ ಭರಿಸಲು ಮಂಜೂರಾತಿ ನೀಡಿದೆ. ವಿವರಗಳನ್ನು ಅನುಬಂಧದಲ್ಲಿ ನೀಡಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 9 ಟಿಎಫ್‌ಪಿ 2005 ದಿನಾಂಕ 07.04.2005ರಲ್ಲಿ ಆಡಳಿತ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ: ಶಮ್ಲಾ ಇಕ್ಬಾಲ್**

ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಶಾಖೆ : ಸ್ವಯಂ ಉದ್ಯೋಗ ಕಾರ್ಯಕ್ರಮ ಯೋಜನೆ : ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ

ಆಯವ್ಯಯ ಪತ್ರದಲ್ಲಿ ಅಥವಾ ಹೆಚ್ಚಿನ ಹಂಚಿಕೆ (ಅಲಾಟ್‌ಮೆಂಟ್) ಗಳಲ್ಲಿ ಉಪಬಂಧ ಕಲ್ಪಿಸಿಲ್ಲದ ಎಲ್ಲಾ ವಿನಿಯೋಗಗಳಿಗೆ ಅಥವಾ ಮಂಜೂರಾತಿಗೆ ಲಗತ್ತಿಸಬೇಕಾದ ಪುನರ್ವಿನಿಯೋಗದ ವಿವರಣೆ

ವರ್ಷ : 2008–09 (ರೂ.ಲಕ್ಷಗಳಲ್ಲಿ)

| ಮುಂಗಡ ಪತ್ರ ಪ್ರಧಾನ ಚಿಕ್ಕ ಉಪ ವಿವರವಾದ ಶೀರ್ಷಿಕೆಗಳು 2501 – ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01–ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 198–ಗ್ರಾಮ ಪಂಚಾಯತ್‌ಗಳಿಗೆ ಸಹಾಯ 6–ಗ್ರಾಮ ಪಂಚಾಯತ್ 01–ಬ್ಲಾಕ್ ಅನುದಾನ (ಯೋಜನೆ) ಎಸ್‌ಜಿಎಸ್‌ವೈ | | | ಹೆಚ್ಚಿಸಲು ಪ್ರಸ್ತಾವಿಸಲಾದ ಅಂದಾಜಿನ ಶೀರ್ಷಿಕೆ 2501–01–198–6–01 | | | | ಕಡಿಮೆ ಮಾಡಲು ಪ್ರಸ್ತಾವಿಸಲಾದ ಅಂದಾಜಿನ ಶೀರ್ಷಿಕೆ 2501–01–18–6–01 | | | | ಷರಾ ಹಣ ಹಂಚಿಕೆ (ಅಲಾಟ್‌ಮೆಂಟ್) ಮೀರಿರುವುದಕ್ಕೆ ಮತ್ತು ಉಳಿತಾಯ ನಿರೀಕ್ಷಿಸುವುದಕ್ಕೆ ಕಾರಣಗಳನ್ನು ಇಲ್ಲಿ ಪೂರ್ಣವಾಗಿ ವಿವರಿಸಬೇಕು. |
|---|---|---|---|---|---|---|---|---|---|---|---|
| | ಜಿಲ್ಲಾ ಕೋಡ್ | ಜಿಲ್ಲಾ ಪಂಚಾಯತ್ | ಮಂಜೂರಾದ ಆಯವ್ಯಯ ಅಂದಾಜಿನಲ್ಲಿರುವ ಮೊತ್ತ | ಈವರೆಗೆ ಆಗಿರುವ ವಾಸ್ತವಿಕ ವೆಚ್ಚ (ಎಂದರೆ) | ವರ್ಷದ ಉಳಿದ ಅವಧಿಯಲ್ಲಿ ಸಂಭವನೀಯ ವೆಚ್ಚ | ಬೇಕಾದ ಹೆಚ್ಚಿನ ಅಲಾಟ್‌ಮೆಂಟ್ ವಿವರ | ಮಂಜೂರಾದ ಆಯವ್ಯಯ ಅಂದಾಜಿನಲ್ಲಿರುವ ಮೊತ್ತ | ಈವರೆಗೆ ಆಗಿರುವ ವಾಸ್ತವಿಕ ವೆಚ್ಚ (ಎಂದರೆ) | ವರ್ಷದ ಉಳಿದ ಅವಧಿಯಲ್ಲಿ ಸಂಭವನೀಯ ವೆಚ್ಚ | ಪುನರ್ವಿನಿಯೋಗಕ್ಕೆ ಲಭ್ಯವಿರುವ ಮೊತ್ತ | |
| 1 | | | 2 | 3 | 4 | 5 | 6 | 7 | 8 | 9 | 10 |
| | 404 | ಕೋಲಾರ | 45.60 | 38.81 | 11.15 | 4.36 | | | | | ಕೋಲಾರ ಮತ್ತು ರಾಮನಗರ ಜಿಲ್ಲೆಗೆ ಕೇಂದ್ರ ಸರ್ಕಾರ ಅನುದಾನ ಪುನರ್ ನಿಗದಿಗೊಳಿಸಿ ಬಿಡುಗಡೆ ಮಾಡಲಾಗಿತ್ತು. ಇದಕ್ಕನುಗುಣವಾಗಿ ರಾಜ್ಯದ ಆಯವ್ಯಯದಲ್ಲಿ ರಾಜ್ಯದ ಪಾಲಿನ ಅನುದಾನ ಒದಗಿಸಿಲ್ಲ ಚಿಕ್ಕಮಗಳೂರು ಮತ್ತು ಉತ್ತರ ಕನ್ನಡ ಜಿಲ್ಲೆಗಳಿಗೆ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ 2ನೇ ಕಂತಿನ ಅನುದಾನಕ್ಕೆ ಅನುಗುಣವಾಗಿ ರಾಜ್ಯದ ಪಾಲಿನ ಅನುದಾನ ಬಿಡುಗಡೆ ಮಾಡಲು ಅನುದಾನ ಕಾಯ್ದಿರಿಸಿದ ಉಳಿದ ಅನುದಾನ ಪುನರ್ವಿನಿಯೋಗಕ್ಕೆ ಉಪಯೋಗಿಸಿಕೊಳ್ಳಲಾಗುವುದು. |
| | 452 | ರಾಮನಗರ | 31.16 | 31.16 | 31.16 | 31.16 | | | | | |
| | | | 76.76 | 69.97 | 42.31 | 35.52 | | | | | |
| | 408 | ಚಿಕ್ಕಮಗಳೂರು | | | | | 59.40 | 42.72 | 0.00 | 16.68 | |
| | 416 | ಉತ್ತರ ಕನ್ನಡ | | | | | 66.16 | 33.08 | 14.24 | 18.84 | |
| | | **ಒಟ್ಟು** | | | | | **125.56** | **75.80** | **14.24** | **35.52** | |

**ಪಿ. ರವಿಕುಮಾರ್**
ಸರ್ಕಾರದ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್. 956

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಹೆಚ್.ಎಸ್. ನಾಗರಾಳ, ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂ ದಾಖಲೆಗಳ ಉಪ ನಿರ್ದೇಶಕರು, ಇವರ ಅಮಾನತ್ತು ಆದೇಶವನ್ನು ರದ್ದುಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸ.ಆ,ಸಂ.ಕಂಇ 23 ಭೂದಾಸೇ(1) 2008 ದಿನಾಂಕ 31.5.2008.
2. ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಆರ್ದೇಶ ಸಂಖ್ಯೆ: ಕೆ.ಎ.ಟಿ.ಆದೇಶ ಸಂ.5304/2008 ದಿನಾಂಕ: 7.1.2009.
3. ಶ್ರೀ ಹೆಚ್.ಎಸ್.ನಾಗರಾಳ, ಭೂ ದಾಖಲೆಗಳ ಉಪ ನಿರ್ದೇಶಕರು, ಇವರು ಸಲ್ಲಿಸಿರುವ ಮನವಿ ದಿನಾಂಕ 16.1.2009.

**ಪ್ರಸ್ತಾವನೆ:**

ಅವರ ಆರಕ್ಷಕ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಪತ್ರ ಸಂ.ಲೋಕ್/ಐಎನ್‌ವಿ(ಜಿ)ಎಲ್.36/ಸಿಆರ್.3/2007 ಧಾರವಾಡ ದಿನಾಂಕ:3.5.2008ರ ಪತ್ರದಲ್ಲಿ ಶ್ರೀ ಹೆಚ್.ಎಸ್.ನಾಗರಾಳ, ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಉಪ ನಿರ್ದೇಶಕರು, ಭೂದಾಖಲೆಗಳ ವಿಭಾಗ, ಧಾರವಾಡ ರವರು ತಮ್ಮ ಬಲ್ಲ ಮೂಲಗಳ ಅದಾಯಕ್ಕಿಂತ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವರೆಂದು ತಿಳಿದುಬಂದ ವಿಶ್ವಾಸಾರ್ಹ ಮಾಹಿತಿಯನ್ವಯ ಅವರ ವಿರುದ್ಧ ಪೋಲಿಸ್ ಉಪಾಧೀಕ್ಷರು, ಕರ್ನಾಟಕ ಲೋಕಾಯುಕ್ತ, ಗದಗ್ ರವರು ದಿನಾಂಕ 24.8.2007 ರಂದು ಲಂಚ ನಿರೋಧಕ ಕಾಯ್ದೆ 1988 ರ ಕಲಂ 13(1) (ಇ) ಸಹ ಕಲಂ13(2)ರ ಪ್ರಕಾರ ಮೊಕದ್ದಮೆ ಸಂ.3/2007 ಪ್ರಕರಣ ದಾಖಲು ಮಾಡಿಕೊಂಡು ತನಿಖೆಯನ್ನು ಕೈಗೊಂಡಿರುತ್ತಾರೆಂದು ತಿಳಿಸುತ್ತಾ ಶ್ರೀಯುತರನ್ನು ಕೂಡಲೇ ಅಮಾನತ್ತಿನಲ್ಲಿಡಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿದ್ದ ಹಿನ್ನಲೆಯಲ್ಲಿ ಮೇಲೆ(1)ರಲ್ಲಿ ಓದಲಾದ ದಿನಾಂಕ 31.5.2008ರ ಆದೇಶದಲ್ಲಿ ಶ್ರೀ ಹೆಚ್.ಎಸ್.ನಾಗರಾಳ ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರು, ಧಾರವಾಡರವರ ವಿರುದ್ಧ ಶಿಸ್ತು ಕ್ರಮ ಕಾಯ್ದಿರಿಸಿ ಅವರನ್ನು ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು ಮತ್ತು ಹೆಚ್.ಎಸ್.ನಾಗರಾಳ ರವರ ಲೀನ್ ಅನ್ನು ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರು, ಜಿಲ್ಲಾಧಿಕಾರಿಗಳ ಕಛೇರಿ, ಚಿತ್ರದುರ್ಗ ಜಿಲ್ಲೆಗೆ ಖಾಲಿ ಇರುವ ಹುದ್ದೆಗೆ ವರ್ಗಾಯಿಸಲಾಗಿತ್ತು.

ಶ್ರೀ ಹೆಚ್.ಎಸ್.ನಾಗರಾಳ ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರು, ಇವರು ಸದರಿ ಅಮಾನತ್ತು ಆದೇಶದ ವಿರುದ್ಧ ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂ.5304/2008 ನ್ನು ಸಲ್ಲಿಸಿದ್ದರು. ಮೇಲೆ (2) ರಲ್ಲಿ ಓದಲಾದ ಗೌರವಾನ್ವಿತ ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಅರ್ಜಿ ಸಂ.5304/2008 ದಿನಾಂಕ 7.1.2009ರ ಆದೇಶದಲ್ಲಿ ಈ ಕೆಳಕಂಡಂತೆ ಆದೇಶಿಸಿರುತ್ತಾರೆ.

For the above said reasons, the application is aloowed and Government Order No. ಕಂಇ 23 ಭೂದಾಸೇ (1) 2008 dated 31.5.2008 (Annexure-A1) suspending the applicant from service is hereby quashed, keeping liberty to the appointing authority or the competent authority to pass a fresh order, if it so desires.

ಶ್ರೀ ಹೆಚ್.ಎಸ್. ನಾಗರಾಳ ರವರು ಪ್ರಸ್ತುತ ಅಮಾನತ್ತಿನಲ್ಲಿ ಇರುವ ಇವರು ಮೇಲೆ (3)ರಲ್ಲಿ ಓದಲಾದ ದಿನಾಂಕ 16.1.2009ರ ಮನವಿಯಲ್ಲಿ ಸರ್ಕಾರದಿಂದ ಹೊರಡಿಸಲಾದ ಅಮಾನತ್ತಿನ ಆದೇಶವನ್ನು ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಅರ್ಜಿ ಸಂ. 5304/2008 ದಿನಾಂಕ 7.1.2009ರ ಆದೇಶದಲ್ಲಿ ರದ್ದುಗೊಳಿಸಿರುವುದರಿಂದ ಪುನಃ ಸೇವೆ ಮಾಡಲು ಅನುಕೂಲ ಮಾಡಿಕೊಡಬೇಕೆಂದು ಕೋರಿರುತ್ತಾರೆ.

ಮೇಲ್ಕಂಡ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 5 ಭೂದಾಸೇ(1) 2009, ಬೆಂಗಳೂರು, ದಿನಾಂಕ: 19ನೇ ಮಾರ್ಚ್ 2009**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಸರ್ಕಾರವು ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯ ಶ್ರೀ ಹೆಚ್.ಎಸ್. ನಾಗರಾಳ, ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರು (ಅಮಾನತ್ತಿನಲ್ಲಿರುವವರು)ರವರ ಬಗ್ಗೆ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಅರ್ಜಿ ಸಂಖ್ಯೆ 5304/2008 ದಿನಾಂಕ 7.1.2009ರಲ್ಲಿ ಮಾಡಿರುವ ಆದೇಶದಂತೆ, ಅವರ ಅಮಾನತ್ತು ಅದೇಶ ಸಂ.ಕಂಇ 23 ಭೂದಾಸೆ(1) 2008 ದಿನಾಂಕ 31.5.2008 ನ್ನು ರದ್ದುಪಡಿಸಿ, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರು, ಜಿಲ್ಲಾಧಿಕಾರಿಗಳ ಕಛೇರಿ. ಬೀದರ್ ಇಲ್ಲಿ ಖಾಲಿ ಇರುವ ಹುದ್ದೆಗೆ ನೇಮಿಸಿ ಆದೇಶಿಸಿದೆ.

ಶ್ರೀಯುತರನ್ನು ಅಮಾನತ್ತುಗೊಳಿಸದೆ ಇದ್ದರೆ ಯಾವ ಸೌಲಭ್ಯವನ್ನು ಪಡೆಯುತ್ತಿದ್ದರೋ ಅಂತಹ ಎಲ್ಲಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ನೇಮಿಸಲಾದ ಹುದ್ದೆಗೆ ಹಾಜರಾಗಿ ಸರ್ಕಾರಕ್ಕೆ ವರದಿ ನೀಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 977

**ಎಸ್. ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಾಪನ)

**ಕಾರ್ಮಿಕ ಸಚಿವಾಲಯ**

**ವಿಷಯ:** ಕಾರ್ಮಿಕ ಇಲಾಖೆಯ ಮುಂದುವರೆದ ಯೋಜನಾ ಕಾರ್ಯಕ್ರಮಗಳನ್ನು 2009–10ನೇ ಆರ್ಥಿಕ ವರ್ಷಕ್ಕೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1. ಕಾರ್ಮಿಕ ಆಯುಕ್ತರು, ಬೆಂಗಳೂರು ಇವರ ಪತ್ರ ಸಂಖ್ಯೆ: ಎಸಿಟಿ–1/ಸಿಆರ್–61/2008–09, ದಿನಾಂಕ:13.03.2009.

2. ದಿನಾಂಕ:21.03.2009ರಂದು ಕಾರ್ಯದರ್ಶಿ, ಕಾರ್ಮಿಕ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಮುಂದುವರೆದ ಯೋಜನೆಗಳನ್ನು ಮುಂದುವರೆಸಲು ಮಂಜೂರಾತಿ ನೀಡುವ ಸಮಿತಿ ಸಭೆಯ ನಡೆವಳಿಗಳು.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ಕಾರ್ಮಿಕ ಆಯುಕ್ತರ ದಿನಾಂಕ:13.3.2009ರ ಪತ್ರದಲ್ಲಿ ಕಾರ್ಮಿಕ ಇಲಾಖೆಗೆ ಸಂಬಂಧಿಸಿದ 2008–09ನೇ ಸಾಲಿನಲ್ಲಿ ಮುಂದುವರೆದ ಯೋಜನಾ ಕಾರ್ಯಕ್ರಮಗಳನ್ನು ಮತ್ತು ಯೋಜನೆ ಅಡಿ ಮುಂದುವರೆಸಲಾದ ಹುದ್ದೆಗಳನ್ನು 2009–10ನೇ ಸಾಲಿನಲ್ಲಿ ಮುಂದುವರೆಸುವಂತೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. 2008–09ನೇ ಸಾಲಿನಲ್ಲಿನ ಯೋಜನಾ ಕಾರ್ಯಕ್ರಮಗಳನ್ನು ಮತ್ತು ಯೋಜನೆ ಅಡಿ ಇರುವ ಹುದ್ದೆಗಳನ್ನು 2009–10ನೇ ಸಾಲಿನಲ್ಲಿ ಮುಂದುವರೆಸುವ ಬಗ್ಗೆ ಕಾರ್ಮಿಕ ಇಲಾಖೆಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ:21.3.2009ರಂದು ನಡೆದ ಸಭೆಯಲ್ಲಿ ವಿವರವಾಗಿ ಚರ್ಚಿಸಿ, 2008–09ನೇ ಸಾಲಿನಲ್ಲಿ ಮುಂದುವರೆದ ಯೋಜನಾ ಕಾರ್ಯಕ್ರಮಗಳನ್ನು ಹಾಗೂ ಯೋಜನೆಯಡಿ ಇರುವ 62 ಹುದ್ದೆಗಳನ್ನು 2009–10ನೇ ಸಾಲಿಗೆ ನಿಗದಿಪಡಿಸಿರುವ ಆಯವ್ಯಯದಂತೆ ಮುಂದುವರೆಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 119 ಎಲ್‌ಇಟಿ 2009, ಬೆಂಗಳೂರು, ದಿನಾಂಕ: 3ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಈ ಆದೇಶಕ್ಕೆ ಲಗತ್ತಿಸಿದ ಅನುಬಂಧದಲ್ಲಿ ಇರುವ ಯೋಜನೆಗಳನ್ನು ಹಾಗೂ ಅದರ ಅಡಿಯಲ್ಲಿನ ಹುದ್ದೆಗಳನ್ನು 2009–10ನೇ ಸಾಲಿಗೆ ನಿಗದಿಪಡಿಸಿರುವ ಆಯವ್ಯಯದಂತೆ ಮುಂದುವರೆಸಲು ಈ ಕೆಳಕಾಣಿಸಿದ ಷರತ್ತುಗಳಿಗೆ ಒಳಪಟ್ಟು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

1) 2008–09ನೇ ಸಾಲಿನಲ್ಲಿ ಹೊಸದಾಗಿ ಮಂಜೂರಾದ ಯೋಜನಾ ಕಾರ್ಯಕ್ರಮಗಳನ್ನು ಮಾತ್ರ ಮುಂದುವರೆಸಬೇಕು.
2) 2008–09ನೇ ಸಾಲಿನಲ್ಲಿ ಮುಂದುವರೆದ ಯೋಜನಾ ಹುದ್ದೆಗಳು ರದ್ದಾದ್ದಲ್ಲಿ, ಅಂತಹವುಗಳನ್ನು 2009–10ನೇ ಸಾಲಿನಲ್ಲಿ ಮುಂದುವರೆದ ಯೋಜನಾ ಕಾರ್ಯಕ್ರಮಗಳಿಂದ ತೆಗೆದು ಹಾಕುವುದು ಹಾಗೂ 2008–09ನೇ ಸಾಲಿನಲ್ಲಿ ಯೋಜನಾ ಕಾರ್ಯಕ್ರಮವನ್ನು ಕೈಬಿಟ್ಟಿದ್ದರೆ, ಅಂತಹ ಕಾರ್ಯಕ್ರಮಗಳನ್ನು 2009–10ನೇ ಸಾಲಿನಲ್ಲಿ ಯೋಜನೆ ಅಡಿಯಲ್ಲಿ ಮುಂದುವರೆದ ಕಾರ್ಯಕ್ರಮಗಳ ಪಟ್ಟಿಯಿಂದ ತೆಗೆದು ಹಾಕಬೇಕು.
3) ಮುಂದುವರೆದ ಯೋಜನಾ ಕಾರ್ಯಕ್ರಮಗಳಲ್ಲಿ ಯಾವುದೇ ಹೊಸ ಘಟಕಗಳ ಪ್ರಸ್ತಾಪವಿದ್ದಲ್ಲಿ, ಅವುಗಳಿಗೆ ಪ್ರತ್ಯೇಕವಾದ ಪ್ರಸ್ತಾವನೆಗಳನ್ನು ಸಲ್ಲಿಸಿ, ನಿಯಮಾನುಸಾರ ಮಂಜೂರಾತಿ ಪಡೆಯಬೇಕು.
4) ಕೇಂದ್ರ ಪರಿಷ್ಕೃತ ಹಾಗೂ ಕೇಂದ್ರ ಯೋಜನಾ ಕಾರ್ಯಕ್ರಮಗಳನ್ನು ಕೇಂದ್ರ ಸರ್ಕಾರವು 2009–10ನೇ ಸಾಲಿನಲ್ಲಿ ಮುಂದುವರೆಸುವುದನ್ನು ಮತ್ತು ಕೇಂದ್ರ ಸರ್ಕಾರವು 2009–10ನೇ ಸಾಲಿನ ಲೇಖಾನುದಾನ ಆಯವ್ಯಯದಲ್ಲಿ ಹಣ ಒದಗಿಸಿರುವುದನ್ನು ಖಚಿತಪಡಿಸಿಕೊಂಡ ನಂತರ, 2009–10ನೇ ಸಾಲಿನಲ್ಲಿ ಇಂತಹ ಯೋಜನಾ ಕಾರ್ಯಕ್ರಮಗಳನ್ನು ಮುಂದುವರೆಸಬೇಕು.
5) ಆರ್ಥಿಕ ಇಲಾಖೆಯು ಕಾಲಕಾಲಕ್ಕೆ ಹೊರಡಿಸುವ ಆರ್ಥಿಕ ಮಿತವ್ಯಯ ಆದೇಶಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10.07.96ರನ್ವಯ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಎಸ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ

## 2009–10ನೇ ಸಾಲಿಗೆ ಮುಂದುವರೆದ ಯೋಜನೆಗಳ ವಿವರಗಳು

**ಕಾರ್ಮಿಕ ಇಲಾಖೆ** **ಅನುಬಂಧ**

| ಕ್ರ. ಸಂ. | ಯೋಜನೆಯ ಹೆಸರು | ಯೋಜನೆಯನ್ನು ಮಂಜೂರು ಮಾಡಿದ ಸರ್ಕಾರಿ ಆದೇಶ ಸಂಖ್ಯೆ ಮತ್ತು ದಿನಾಂಕ | 2009–10ನೇ ಸಾಲಿನಲ್ಲಿ ವೆಚ್ಚವನ್ನು ಭರಿಸಬೇಕಾದ ಲೆಕ್ಕ ಶೀರ್ಷಿಕೆ | ಮೂಲತಃ ಮಂಜೂರಾದ ಹುದ್ದೆಗಳ ಸಂಖ್ಯೆ | ಯೋಜನೆಯಲ್ಲಿ 2009–10ನೇ ಸಾಲಿನಲ್ಲಿ ಮುಂದುವರೆಸಬೇಕಾದ ಹುದ್ದೆಗಳು | 2009–10ನೇ ಸಾಲಿನಲ್ಲಿ ಯೋಜನೆಗೆ ಒದಗಿಸಿರುವ ಮೊತ್ತ ರೂ.ಲಕ್ಷಗಳಲ್ಲಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಕಾರ್ಮಿಕ ಕಾನೂನುಗಳ ಸಮಾಚರಣೆ | ಸಂಖ್ಯೆ:ಸಿಆಸುಇ 3 ಸಸಿಎ 97 ದಿನಾಂಕ 17.6.1997 | 2230–01–101–0–01 | 1.ವಿಶೇಷಾಧಿಕಾರಿ, ಬಾಲಕಾರ್ಮಿಕ ಕೋಶ –1 | 1.ಉಪ ವಿಶೇಷಾಧಿಕಾರಿ, ಬಾಲಕಾರ್ಮಿಕ ಕೋಶ –1 | 39.20 |
| | | | | 2.ಉಪ ವಿಶೇಷಾಧಿಕಾರಿ, ಬಾಲಕಾರ್ಮಿಕ ಕೋಶ –1 | 2.ಸಹಾಯಕರು –2 | |
| | | | | 3.ಸಹಾಯಕರು –2 | 3.ಶೀಘ್ರಲಿಪಿಗಾರರು –1 | |
| | | | | 4.ಶೀಘ್ರಲಿಪಿಗಾರರು –1 | 4.ವಾಹನ ಚಾಲಕರು –1 | |
| | | | | 5.ವಾಹನ ಚಾಲಕರು –1 | 5.ಗ್ರೂಪ್–ಡಿ ನೌಕರರು –2 | |
| | | | | 6.ಗ್ರೂಪ್–ಡಿ ನೌಕರರು –2 | | |
| | | | | **ಒಟ್ಟು 8** | **ಒಟ್ಟು 7** | |
| 2. | ಕಾರ್ಮಿಕ ಕಾನೂನುಗಳ ಸಮಾಚರಣೆ | ಸಂ.ಕಂಇ/27/ಭೂದಾಪು 2006 ದಿನಾಂಕ: 21.8.2007 | 2230–01–101–0–01 | ಕಾರ್ಮಿಕ ಅಧಿಕಾರಿ–2 | ಕಾರ್ಮಿಕ ಅಧಿಕಾರಿ, ರಾಮನಗರ 1 | |
| | | | | | ಕಾರ್ಮಿಕ ಅಧಿಕಾರಿ, ಚಿಕ್ಕಬಳ್ಳಾಪುರ 1 | |
| | | | | **ಒಟ್ಟು 2** | **ಒಟ್ಟು 2** | |
| 3. | ಕಾರ್ಮಿಕ ಕಾನೂನುಗಳ ಸಮಾಚರಣೆ | ಸಂ.ಕಂಇ/27/ಭೂದಾಪು 2006 ದಿನಾಂಕ: 21.8.2007 | | ಪ್ರಥಮ ದರ್ಜೆ ಸಹಾಯಕರು–2 | ಕಾರ್ಮಿಕ ಅಧಿಕಾರಿ ಕಚೇರಿ, ಚಿಕ್ಕಬಳ್ಳಾಪುರ 1 | |
| | | | | | ಕಾರ್ಮಿಕ ಅಧಿಕಾರಿ ಕಚೇರಿ ರಾಮನಗರ 1 | |
| | | | | **ಒಟ್ಟು 2** | **ಒಟ್ಟು 2** | |
| | | ಸಂ.ಕಂಇ 314 ಎಲ್ಇಟಿ 98 ದಿನಾಂಕ: 18.09.1998 | | ದ್ವಿತೀಯ ದರ್ಜೆ ಸಹಾಯಕರು 13 | ದ್ವಿತೀಯ ದರ್ಜೆ ಸಹಾಯಕರು 6 | |
| | | | | | 1.ಕಾರ್ಮಿಕ ಅಧಿಕಾರಿ ಕಛೇರಿ, ಬಾಗಲಕೋಟೆ | |

| 1 | 2 | 3 | 4 | 5 | | 6 | | 7 |
|---|---|---|---|---|---|---|---|---|
| | | | | | | 2.ಕಾರ್ಮಿಕ ಅಧಿಕಾರಿ, ಕಛೇರಿ, ಕೊಪ್ಪಳ | | |
| | | | | | | 3.ಕಾರ್ಮಿಕ ಅಧಿಕಾರಿ ಕಛೇರಿ, ಚಿಕ್ಕಮಗಳೂರು | | |
| | | | | | | 4.ಕಾರ್ಮಿಕ ಅಧಿಕಾರಿ ಕಛೇರಿ, ಉಪ ವಿಭಾಗ–2, ಬಳ್ಳಾರಿ | | |
| | | | | | | 5.ಕಾರ್ಮಿಕ ಅಧಿಕಾರಿ ಕಛೇರಿ, ಉಪ ವಿಭಾಗ–2, ಮಂಡ್ಯ | | |
| 4. | ಕಾರ್ಮಿಕ ಕಾನೂನುಗಳ ಸಮಾಚರಣೆ | ಸಂ.ಕಂಇ/27/ಭೂದಾಪು 2006 ದಿನಾಂಕ: 21.8.2007 | | | | 6.ಕಾರ್ಮಿಕ ಅಧಿಕಾರಿ ಕಛೇರಿ, ರಾಮನಗರ | | |
| | | | | **ಒಟ್ಟು** | **14** | **ಒಟ್ಟು** | **6** | |
| 5. | ಕಾರ್ಮಿಕ ಕಾನೂನುಗಳ ಸಮಾಚರಣೆ | ಸಂಖ್ಯೆ:ಕಾಇ 314 ಎಲ್ಇಟಿ 98, ದಿನಾಂಕ: 18.09.1998 | 2230–01–101–0–01 | ಶೀಘ್ರಲಿಪಿಗಾರರು | 13 | ಶೀಘ್ರಲಿಪಿಗಾರರು | 10 | |
| | | | | | | 1. ಕಾರ್ಮಿಕ ಅಧಿಕಾರಿ ಕಛೇರಿ, ಉಪ ವಿಭಾಗ–6, ಬೆಂಗಳೂರು | | |
| | | | | | | 2. ಕಾರ್ಮಿಕ ಅಧಿಕಾರಿ ಕಛೇರಿ, ಉಪ ವಿಭಾಗ–2, ಮಂಗಳೂರು | | |
| | | | | | | 3. ಕಾರ್ಮಿಕ ಅಧಿಕಾರಿ ಕಛೇರಿ, ಉಪ ವಿಭಾಗ–2, ಹುಬ್ಬಳ್ಳಿ | | |
| | | | | | | 4. ಕಾರ್ಮಿಕ ಅಧಿಕಾರಿ ಕಛೇರಿ, ಉಪ ವಿಭಾಗ–2, ಬಿಜಾಪುರ | | |
| | | | | | | 5. ಕಾರ್ಮಿಕ ಅಧಿಕಾರಿ ಕಛೇರಿ, ಉಪ ವಿಭಾಗ–2, ಬಳ್ಳಾರಿ | | |
| | | | | | | 6. ಕಾರ್ಮಿಕ ಅಧಿಕಾರಿ ಕಛೇರಿ, ಚಾಮರಾಜನಗರ | | |
| | | | | | | 7. ಕಾರ್ಮಿಕ ಅಧಿಕಾರಿ ಕಛೇರಿ, ಕೊಪ್ಪಳ | | |
| | | | | | | 8. ಕಾರ್ಮಿಕ ಅಧಿಕಾರಿ ಕಛೇರಿ, ಬಾಗಲಕೋಟೆ | | |
| 6. | ಕಾರ್ಮಿಕ ಕಾನೂನುಗಳ ಸಮಾಚರಣೆ | ಸಂಖ್ಯೆ:ಕಂಇ/27/ಭೂದಾಪು 2006, ದಿನಾಂಕ: 21.8.2007 | | ಶೀಘ್ರಲಿಪಿಗಾರರು | 2 | 9. ಕಾರ್ಮಿಕ ಅಧಿಕಾರಿ ಕಛೇರಿ, ಚಿಕ್ಕಬಳ್ಳಾಪುರ | | |

| 1 | 2 | 3 | 4 | 5 | 6 | 7 |
|---|---|---|---|---|---|---|
| | | | | | 10. ಕಾರ್ಮಿಕ ಅಧಿಕಾರಿ ಕಛೇರಿ, ರಾಮನಗರ | |
| | | | | **ಒಟ್ಟು 15** | **ಒಟ್ಟು 10** | |
| 7. | ಕಾರ್ಮಿಕ ಕಾನೂನುಗಳ ಸಮಾಚರಣೆ | ಸಂಖ್ಯೆ:ಕಾಇ 166 ಎಲ್ಇಟಿ 97 ದಿನಾಂಕ: 24.6.99 | 2230–01–101–0–01 | ಕಾರ್ಮಿಕ ನಿರೀಕ್ಷಕರು 26 | ಕಾರ್ಮಿಕ ನಿರೀಕ್ಷಕರು 19 | |
| | | | | | 1. ಕಾನಿ [ಬಾಕಾ] ಬೆಂಗಳೂರು ನಗರ ಜಿಲ್ಲೆ | |
| | | | | | 2. ಕಾನಿ [ಬಾಕಾ] ಬೆಂಗಳೂರು ನಗರ ಜಿಲ್ಲೆ | |
| | | | | | 3. [ಬಾಕಾ] ಬೆಂಗಳೂರು ಗ್ರಾಮಾಂತರ ಜಿಲ್ಲೆ | |
| | | | | | 4. [ಬಾಕಾ] ಬೆಂಗಳೂರು ಗ್ರಾಮಾಂತರ ಜಿಲ್ಲೆ | |
| | | | | | 5. [ಬಾಕಾ] ಮಂಗಳೂರು | |
| | | | | | 6. [ಬಾಕಾ] ಮಂಗಳೂರು | |
| | | | | | 7. [ಬಾಕಾ] ಬಳ್ಳಾರಿ | |
| | | | | | 8. [ಬಾಕಾ] ಬಳ್ಳಾರಿ | |
| | | | | | 9. [ಬಾಕಾ] ಮೈಸೂರು 1ನೇ ವೃತ್ತ | |
| | | | | | 10. [ಬಾಕಾ] ಮೈಸೂರು 2ನೇ ವೃತ್ತ | |
| | | | | | 11. [ಬಾಕಾ] ಚಿಕ್ಕಮಗಳೂರು | |
| | | | | | 12. [ಬಾಕಾ] ಮಂಡ್ಯ | |
| | | | | | 13. [ಬಾಕಾ] ರಾಯಚೂರು | |
| | | | | | 14. [ಬಾಕಾ] ಬಿಜಾಪುರ | |
| | | | | | 15. [ಬಾಕಾ] ಬಿಜಾಪುರ | |
| | | | | | 16. [ಬಾಕಾ] ಹುಬ್ಬಳ್ಳಿ | |
| | | | | | 17. [ಬಾಕಾ] ಹುಬ್ಬಳ್ಳಿ | |
| | | | | | 18. ಬಿಜಾಪುರ | |
| | | | | | 19. ಚಿತ್ರದುರ್ಗ | |

| 1 | 2 | 3 | 4 | 5 | 6 | 7 |
|---|---|---|---|---|---|---|
| 8. | ಕಾರ್ಮಿಕ ಕಾನೂನುಗಳ ಸಮಾಚರಣೆ | ಸಂಖ್ಯೆ:ಕಾಇ 314 ಎಲ್ಇಟಿ 98 ದಿನಾಂಕ: 18.09.08 | 2230–01–101–0–01 | ಡಿ ಗ್ರೂಪ್ – ಜವಾನರು 13 | ಡಿ ಗ್ರೂಪ್ – ಜವಾನರು 10 | |
| | | | | | 1. ಕಾರ್ಮಿಕ ಅಧಿಕಾರಿಯವರ ಕಛೇರಿ, ಉಪವಿಭಾಗ–5, ಬೆಂಗಳೂರು | |
| | | | | | 2. ಕಾರ್ಮಿಕ ಅಧಿಕಾರಿಯವರ ಕಛೇರಿ, ಉಪವಿಭಾಗ–6, ಬೆಂಗಳೂರು | |
| | | | | | 3. ಕಾರ್ಮಿಕ ಅಧಿಕಾರಿಯವರ ಕಛೇರಿ, ಉಪವಿಭಾಗ–2, ಮಂಗಳೂರು | |
| | | | | | 4. ಕಾರ್ಮಿಕ ಅಧಿಕಾರಿಯವರ ಕಛೇರಿ, ಉಪವಿಭಾಗ–2, ಚಿಕ್ಕಮಗಳೂರು | |
| | | | | | 5. ಕಾರ್ಮಿಕ ಅಧಿಕಾರಿಯವರ ಕಛೇರಿ, ಉಪವಿಭಾಗ–2, ಮಂಡ್ಯ | |
| | | | | | 6. ಕಾರ್ಮಿಕ ಅಧಿಕಾರಿಯವರ ಕಛೇರಿ, ಉಪವಿಭಾಗ–2, ಬಿಜಾಪುರ | |
| | | | | | 7. ಕಾರ್ಮಿಕ ಅಧಿಕಾರಿಯವರ ಕಛೇರಿ, ಹಾವೇರಿ | |
| | | | | | 8. ಕಾರ್ಮಿಕ ಅಧಿಕಾರಿಯವರ ಕಛೇರಿ, ಬಾಗಲಕೋಟೆ | |
| | | | | | 9. ಕಾರ್ಮಿಕ ಅಧಿಕಾರಿಯವರ ಕಛೇರಿ, ಚಾಮರಾಜನಗರ | |
| | ಕಾರ್ಮಿಕ ಕಾನೂನುಗಳ ಸಮಾಚರಣೆ | ಸಂ.ಕಂಇ/27/ಭೂದಾಪು 2006 ದಿನಾಂಕ: 21.8.2007 | | ಡಿ ಗ್ರೂಪ್–ಜವಾನರು 1 | 10. ಕಾರ್ಮಿಕ ಅಧಿಕಾರಿಯವರ ಕಛೇರಿ, ರಾಮನಗರ | |
| | | | | **ಒಟ್ಟು 14** | **ಒಟ್ಟು 10** | |

| 1 | 2 | 3 | 4 | 5 | 6 | 7 |
|---|---|---|---|---|---|---|
| 9. | ಕಾರ್ಮಿಕ ಕಾನೂನುಗಳ ಸಮಾಚರಣೆ | ಕಾಇ–7, ಎಲ್‌ಇಟಿ 98 20.3.1999 ಕಾಇ–195, ಎಲ್‌ಇಟಿ 93 2.2.1999 | 2230–01–101–0–01 | ವಾಹನ ಚಾಲಕರು 3 | ವಾಹನ ಚಾಲಕರು 2 | |
| | | | | ವಾಹನ ಚಾಲಕರು 2 | 1. ಸಹಾಯಕ ಕಾರ್ಮಿಕ ಆಯುಕ್ತರ ಕಛೇರಿ, ಚಿಕ್ಕಮಗಳೂರು–1 | |
| | | | | | 2. ಕೇಂದ್ರ ಕಛೇರಿ–1 | |
| 10. | ಕಾರ್ಮಿಕ ಕಾನೂನುಗಳ ಸಮಾಚರಣೆ | ಎಲ್‌ಡಿ 106 ಆರ್ ಅಂಡ್ ಐ 2000, 19.6.2000 | 2230–01–101–0–01 | ಜೂನಿಯರ್ ಪ್ರೋಗ್ರಾಮರ್– ಕೇಂದ್ರ ಕಛೇರಿ | ಜೂನಿಯರ್ –1 ಪ್ರೋಗ್ರಾಮರ್, ಕೇಂದ್ರ ಕಛೇರಿ | |
| 11. | ಕಾರ್ಮಿಕ ಕಾನೂನುಗಳ ಸಮಾಚರಣೆ | ಎಲ್‌ಡಿ 106 ಆರ್ ಅಂಡ್ ಐ 2000, 19.6.2000 | 2230–01–101–0–01 | ಡಾಟಾ ಎಂಟ್ರಿ ಆಪರೇಟರ್ ಕೇಂದ್ರ ಕಛೇರಿ | ಡಾಟಾ ಎಂಟ್ರಿ –2 ಆಪರೇಟರ್ ಕೇಂದ್ರ ಕಛೇರಿ | |
| | | | | | **ಒಟ್ಟು ಯೋಜನೆ 62 ಹುದ್ದೆಗಳು** | |
| 12. | ಕಾರ್ಮಿಕ ಭವನದ ಭದ್ರತಾ ಸ್ವಚ್ಛತಾ ಸಿಬ್ಬಂದಿ ವೇತನದ ಮತ್ತು ಆಧುನೀಕರಣ | 2009–10ನೇ ಸಾಲಿನ ಆಯವ್ಯಯ ಹಂಚಿಕೆ ದಸ್ತಾವೇಜು | 2230–01–101–0–01– 051 ಸಾಮಾನ್ಯ ವೆಚ್ಚಗಳು | – | 2009–10ನೇ ಸಾಲಿನಲ್ಲಿ ಸದರಿ ಶೀರ್ಷಿಕೆಯಡಿಯಲ್ಲಿ ಸಾಮಾನ್ಯ ವೆಚ್ಚಗಳಿಗಾಗಿ ರೂ. 16.22 ಲಕ್ಷಗಳು ಹಂಚಿಕೆಯಾಗಿ ಇದರಲ್ಲಿ ಕಾರ್ಮಿಕ ಭವನದ ಭದ್ರತಾ ಸ್ವಚ್ಛತಾ ಸಿಬ್ಬಂದಿ ವೇತನ ಹಾಗೂ ಯೋಜನೆಯಡಿಯಲ್ಲಿ ಕಛೇರಿ ವೆಚ್ಚಗಳೂ ಸೇರಿದಂತೆ ವೆಚ್ಚ ಭರಿಸಲಾಗುವುದು. | 16.22 |
| | | 041–ಪ್ರಯಾಣ ವೆಚ್ಚಗಳು | – | | ಹಾಗೂ 62 ಹುದ್ದೆಗಳಿಗೆ ಪ್ರಯಾಣ ವೆಚ್ಚಕ್ಕಾಗಿ ರೂ. 3.15 ಲಕ್ಷಗಳು ಹಂಚಿಕೆಯಾಗಿರುತ್ತದೆ. | 3.15 |

| 1 | 2 | 3 | 4 | 5 | 6 | 7 |
|---|---|---|---|---|---|---|
| | | 195–ಸಾರಿಗೆ ವೆಚ್ಚಗಳು | – | | ಬಾಡಿಗೆ ಆಧಾರದ ಮೇಲೆ ವಾಹನ ಸೌಲಭ್ಯಕ್ಕಾಗಿ ಸಹಾಯಕ ಕಾರ್ಮಿಕ ಆಯುಕ್ತರುಗಳಿಗೆ ಹಾಗೂ ಕಾರ್ಮಿಕ ಅಧಿಕಾರಿಗಳಿಗೆ ವಿತರಿಸಲು ರೂ.108.42 ಲಕ್ಷಗಳ ಆಯವ್ಯಯ ಹಂಚಿಕೆಯಾಗಿರುತ್ತದೆ. | 108.42 |
| 13. | | 071–ಕಟ್ಟಡ ವೆಚ್ಚ | – | | ರಾಮನಗರ ಮತ್ತು ಚಿಕ್ಕಬಳ್ಳಾಪುರ ಕಛೇರಿಗಳ ಕಟ್ಟಡದ ಬಾಡಿಗೆ ಬಾಬ್ತು | 1.05 |
| | | | | | **ಒಟ್ಟು ವೇತನ+ವೇತನೇತರ** | **188.04** |
| II | ಬಾಲಕಾರ್ಮಿಕ ಪದ್ಧತಿ ನಿರ್ಮೂಲನಾ ಕ್ರಿಯಾಯೋಜನೆ | ಎಲ್ ಡಿ 54 ಸಿಎಲ್‌ಸಿ 2001[ಐ] 29.5.2001 | 2230–01–103–6–01 | – | ಈ ಯೋಜನೆಯು 2001 ರಿಂದ ಪ್ರಾರಂಭವಾಗಿದ್ದು, ಸರ್ಕಾರದ ಆದೇಶದಂತೆ ಪ್ರತಿ ವರ್ಷ 600.00 ಲಕ್ಷ ರೂಪಾಯಿ ಬಿಡುಗಡೆ ಮಾಡಬೇಕಾಗಿರುತ್ತದೆ. ಈ ಯೋಜನೆಯು ಮತ್ತೆ 5 ವರ್ಷಗಳ ಅವಧಿಗೆ ಅಂದರೆ 2012 ರವರೆಗೆ ವಿಸ್ತರಿಸಲಾಗಿರುತ್ತದೆ. 2009–10ನೇ ಸಾಲಿಗೆ ರೂ. 450.00 ಲಕ್ಷ ಆಯವ್ಯಯವನ್ನು ಹಂಚಿಕೆ ಮಾಡಲಾಗಿದೆ. ಈ ಆಯವ್ಯಯವನ್ನು ವಿಶೇಷ ವಸತಿ ಶಾಲೆಗಳಿಗೆ, ಜನಜಾಗೃತಿ ಕಾರ್ಯಕ್ರಮಕ್ಕೆ, ರೇಷ್ಮೆ ಉದ್ದಿಮೆಯಲ್ಲಿನ ಬಾಲಕಾರ್ಮಿಕರ ಪುನರ್ವಸತಿಗೆ ಉಪಯೋಗಿಸಿಕೊಳ್ಳಲಾಗುವುದು. ಈ ಯೋಜನೆಯನ್ನು ಮುಂದುವರೆಸಲು ಅನುಮತಿ ಆದೇಶ ಅವಶ್ಯಕವಾಗಿರುತ್ತದೆ. | 450.00 |
| III | ಕಾರ್ಮಿಕ ಭವನದ 1ನೇ ಹಂತದ 3ನೇ ಮಹಡಿ ನಿರ್ಮಾಣಕ್ಕೆ | 2009–10ನೇ ಸಾಲಿನ ಆಯವ್ಯಯ ಹಂಚಿಕೆ ದಸ್ತಾವೇಜು | 4250–00–201–0–04 ಕಾಇ 234 ಎಲ್‌ಇಟಿ 89, ದಿನಾಂಕ: 27.10.1997 | – | ಕಾರ್ಮಿಕ ಭವನದ 1ನೇ ಹಂತದ 3ನೇ ಮಹಡಿಯಲ್ಲಿ ಹೆಚ್ಚುವರಿ ಕೊಠಡಿಗಳನ್ನು ನಿರೀಕ್ಷಕರು ಹಾಗೂ ಕಾರ್ಮಿಕ ತರಬೇತಿ ಸಂಸ್ಥೆ ಆಡಳಿತ ಕಛೇರಿಗೆ ಹಾಗೂ ಉಳಿಕೆ ಕಾಮಗಾರಿಗಳಿಗೆ ಮತ್ತು ಲಿಫ್ಟ್ ಅಳವಡಿಸುವುದಕ್ಕಾಗಿ 2009–10ನೇ ಸಾಲಿನಲ್ಲಿ ರೂ. 40.00 ಲಕ್ಷಗಳ ಆಯವ್ಯಯ ಹಂಚಿಕೆ ಮಾಡಲಾಗಿರುವ ಮೊತ್ತವನ್ನು ಉಪಯೋಗಿಸಿಕೊಳ್ಳಲಾಗುವುದು. | 40.00 |

| 1 | 2 | 3 | 4 | 5 | 6 | 7 |
|---|---|---|---|---|---|---|
| V | ಕರ್ನಾಟಕ ಕಾರ್ಮಿಕ ಕಲ್ಯಾಣ ನಿಧಿಗೆ ಅಂಶ ಧನ | 2009–10ನೇ ಆಯವ್ಯಯ ದಸ್ತಾವೇಜು | 2230–01–103–4–00 | – | ಕಾರ್ಮಿಕ ಕಲ್ಯಾಣ ನಿಧಿಗೆ ಅಂಶ ಧನ ರೂ. 24.00 ಲಕ್ಷಗಳನ್ನು ಹಂಚಿಕೆ ಮಾಡಲಾಗಿದೆ. ಈ ಹಣವನ್ನು ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಗೆ ಕಾರ್ಮಿಕರು ನೀಡಿದ ಒಟ್ಟು ಮೊತ್ತದ ಸಮಾನ ಪ್ರಮಾಣದ ಮೊತ್ತವನ್ನು ಸರ್ಕಾರದ ವಂತಿಗೆಯಾಗಿ ಸದರಿ ಮಂಡಳಿಗೆ ಪಾವತಿಸಲು ವಿನಿಯೋಗಿಸಲಾಗುವುದು. ಈ ದಿಸೆಯಲ್ಲಿ ಹಂಚಿಕೆ ಮಾಡಲಾಗಿರುವ ರೂ. 24.00 ಲಕ್ಷಗಳನ್ನು ಪ್ರಸಕ್ತ ವರ್ಷದಲ್ಲಿ ಉಪಯೋಗಿಸಿಕೊಳ್ಳಲು ಸಂಬಂಧಿಸಿದ ಮಂಡಳಿಗೆ ನೀಡಲಾಗುವುದು. | 24.00 |
| VI | ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಗೆ ಸಹಾಯಾನುದಾನ | 2009–10ನೇ ಸಾಲಿನ ಆಯವ್ಯಯ ದಸ್ತಾವೇಜು | 2230–01–103–7–00 | – | ಕಾರ್ಮಿಕ ಕಲ್ಯಾಣ ಮಂಡಳಿಗೆ ಸಹಾಯಾನುದಾನ ರೂ. 1.00 ಲಕ್ಷಗಳನ್ನು ಹಂಚಿಕೆ ಮಾಡಲಾಗಿದೆ. ಈ ಹಣವನ್ನು ಕಾರ್ಮಿಕ ಕಲ್ಯಾಣ ಮಂಡಳಿಯ ಆಡಳಿತಾತ್ಮಕ ವೆಚ್ಚಗಳನ್ನು ಭರಿಸಲು ಮತ್ತು ಕಾರ್ಮಿಕರಿಗೆ ಸಮುದಾಯ ಭವನ ಮತ್ತು ಹಾಲಿಡೇ ಹೋಮ್ ನಿರ್ಮಿಸುವ ಉದ್ದೇಶದಿಂದ ಈ ಮೊತ್ತವನ್ನು ಉಪಯೋಗಿಸಿಕೊಳ್ಳಲು ಕಾರ್ಮಿಕ ಕಲ್ಯಾಣ ಮಂಡಳಿಗೆ ನೀಡಲಾಗುವುದು. | 1.00 |
| VII | ಕರ್ನಾಟಕ ಕಾರ್ಮಿಕ ತರಬೇತಿ ಸಂಸ್ಥೆ | 2009–10ನೇ ಸಾಲಿನ ಆಯವ್ಯಯ ದಸ್ತಾವೇಜು | 2230–01–277–0–01 | – | ಯೋಜನೆಯು ಅನುಮೋದನೆಯಾಗಿದ್ದು, ಅನುಷ್ಠಾನಕ್ಕಾಗಿ ಸೊಸೈಟಿ ಸ್ಥಾಪಿಸಲಾಗಿದೆ | 56.05 |
| VIII | ವೈದ್ಯಕೀಯ ವೆಚ್ಚದ ಮರುಪಾವತಿ | 2009–10ನೇ ಸಾಲಿನ ಆಯವ್ಯಯ ದಸ್ತಾವೇಜು | 2230–01–001–0–03 | – | ಯೋಜನೆಯಡಿ ಕಾರ್ಯನಿರ್ವಹಿಸುತ್ತಿರುವ 62 ಅಧಿಕಾರಿ ಮತ್ತು ಸಿಬ್ಬಂದಿವರ್ಗದವರ ವೈದ್ಯಕೀಯ ವೆಚ್ಚದ ಮರುಪಾವತಿಗೆ ವೆಚ್ಚ ಭರಿಸಲಾಗುವುದು. | 4.00 |

**ಯು.ಎನ್. ನಾಗೇಂದ್ರ**

ಪಿ.ಆರ್. 1215

ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ

## ಜಲಸಂಪನ್ಮೂಲ ಸಚಿವಾಲಯ

**ವಿಷಯ:–** ಕೋಲಾರ ಜಿಲ್ಲೆ, ಶ್ರೀನಿವಾಸಪುರ ತಾಲ್ಲೂಕು ಬಡಿಪಲ್ಲಿ ಹೊಸಕೆರೆ ನಿರ್ಮಾಣದ ಕಾಮಗಾರಿಯ ಏಕಮಧ್ಯಸ್ಥಿಕೆ ಪ್ರಕರಣಕ್ಕೆ ಹಣ ಪಾವತಿಸುವ ಕುರಿತು.

**ಓದಲಾಗಿದೆ:–** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ಪತ್ರ ವ್ಯವಹಾರ ಅಂತ್ಯಗೊಂಡ ಪತ್ರದ ಸಂಖ್ಯೆ: ಮುಸನೀ(ದ)/ ಐಜಿಎನ್/ಕೋಲಾರ/ಏಕಮಧ್ಯಸ್ಥಿಕೆ/08–09/3808, ದಿನಾಂಕ: 10/10/2008.

**ಪ್ರಸ್ತಾವನೆ:–**

ಕೋಲಾರ ಜಿಲ್ಲೆ, ಶ್ರೀನಿವಾಸಪುರ ತಾಲ್ಲೂಕು ಬಡಿಪಲ್ಲಿ ಹೊಸಕೆರೆ ಕಾಮಗಾರಿಯನ್ನು ರೂ. 29,70,912.00 ಗಳ ಟೆಂಡರ್‌ಗೆ ಇಟ್ಟ ಮೊತ್ತದಂತೆ ರೂ. 28,63,993.00 ಗಳಿಗೆ ಎಲ್.ಸಿ.ಬಿ ಟೆಂಡರ್ ಆಧಾರದ ಮೇಲೆ ಶ್ರೀ ಎ. ವೆಂಕಟರೆಡ್ಡಿ 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲಾಗಿದೆ. ಗುತ್ತಿಗೆದಾರರು ಮತ್ತು ಇಲಾಖೆ ನಡುವೆ ಉಂಟಾದ ವಿವಾದ ಇತ್ಯರ್ಥ ಮಾಡಲು ಶ್ರೀ ಸಿ.ಬಿ.ಲಕ್ಷ್ಮಣರಾವ್, ನಿರ್ದೇಶಕರು, ಕೆ.ಇ.ಆರ್.ಎಸ್. ಕೃಷ್ಣರಾಜಸಾಗರ ರವರನ್ನು ದಿನಾಂಕ: 30/12/1988ರಲ್ಲಿ ಏಕ ಮಧ್ಯಸ್ಥಿಕೆ ದಾರರನ್ನಾಗಿ ನೇಮಿಸಲಾಗಿತ್ತು. ಸದರಿ ಏಕಮಧ್ಯಸ್ಥಿಕೆದಾರರು ದಿನಾಂಕ: 01/09/1989ರಂದು ಐತೀರ್ಪು ನೀಡಿರುತ್ತಾರೆ. ಸದರಿ ಐತೀರ್ಪಿನಲ್ಲಿ ಅಸಲು ಮೊತ್ತದ ಮೇಲೆ ಶೇ.12 ರಂತೆ ಬಡ್ಡಿ ನೀಡಲು ಸೂಚಿಸಲಾಗಿದೆ. ಈ ಪ್ರಕರಣದಲ್ಲಿ ಅಸಲು ಮೊತ್ತ ರೂ. 57,738.00ಗಳು. ಈ ಪ್ರಕರಣದಲ್ಲಿ ಮೇಲ್ಮನವಿ ಸಲ್ಲಿಸುವಂತಹ ಯಾವುದೇ ಅಂಶಗಳು ಇಲ್ಲವೆಂಬುವುದಾಗಿ ಇಲಾಖಾ ಕಾನೂನು ಸಲಹೆಗಾರರು ಅಭಿಪ್ರಾಯ ನೀಡಿರುತ್ತಾರೆ. ಗುತ್ತಿಗೆದಾರರು ಈ ಪ್ರಕರಣದಲ್ಲಿ ನ್ಯಾಯಾಲಯದಿಂದ ಡಿಕ್ರಿ ಮಾಡಿರುವುದಿಲ್ಲ. ಆದರೆ ಕಾನೂನು ಇಲಾಖೆಯು ಮಧ್ಯಸ್ಥಿಕೆದಾರರ ಐತೀರ್ಪಿಗೆ ನ್ಯಾಯಾಲಯದಿಂದ ನ್ಯಾಯಾಜ್ಞೇ/ಡಿಕ್ರಿ ಮಾಡಿಸುವ ಅವಶ್ಯಕತೆ ಇಲ್ಲವೆಂಬುದಾಗಿ ಇಂತಹ ಪ್ರಕರಣದಲ್ಲಿ ಅಭಿಪ್ರಾಯ ನೀಡಿದೆ.

ಈ ಪ್ರಕರಣದಲ್ಲಿ ಗುತ್ತಿಗೆದಾರರೊಂದಿಗೆ ಬಡ್ಡಿ ಪಾವತಿಸುವ ವಿಷಯದಲ್ಲಿ ಇಲಾಖಾ ಅಧಿಕಾರಗಳು ಸಮಲೋಚಿಸಿದ್ದು, ಗುತ್ತಿಗೆದಾರರು ಶೇ. 12ರ ಬದಲು ಶೇ. 10ರ ಬಡ್ಡಿ ದರದಲ್ಲಿ ಐತೀರ್ಪಿನ ಮೊತ್ತವನ್ನು ಸ್ವೀಕರಿಸಲು ಒಪ್ಪಿರುತ್ತಾರೆ. ಅದರಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರು ರೂ. 1,75,130.00 ಗಳನ್ನು ಪಾವತಿಸಲು ಅನುಮೋದನೆ ಕೋರಿ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 21 ಡಬ್ಲ್ಯೂಟಿಎಸ್ 89 ಬೆಂಗಳೂರು, ದಿನಾಂಕ: 15ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೋಲಾರ ಜಿಲ್ಲೆ, ಶ್ರೀನಿವಾಸಪುರ ತಾಲ್ಲೂಕು ಬಡಿಪಲ್ಲಿ ಸಣ್ಣ ನೀರಾವರಿ ಕೆರೆ ಕಾಮಗಾರಿಯು 2ನೇ ಮಧ್ಯಸ್ಥಿಕೆ ಪ್ರಕರಣದಲ್ಲಿ ಗುತ್ತಿಗೆದಾರರಿಗೆ ಪಾವತಿಸ ಬೇಕಾದ ಮೊತ್ತ ರೂ. 1,75,130.00 (ಒಂದು ಲಕ್ಷದ ಎಪ್ಪತ್ತೈದು ಸಾವಿರದ ಒಂದು ನೂರ ಮೂವತ್ತು ರೂಪಾಯಿಗಳು ಮಾತ್ರ)ಗಳನ್ನು ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

1) ಲೆಕ್ಕಾಚಾರದ ತಃಖ್ತೆಯನ್ನು ಮುಖ್ಯ ಲೆಕ್ಕಾಧಿಕಾರಿಗಳಿಂದ ದೃಡೀಕರಿಸಿಕೊಂಡು ಪಾವತಿ ಮಾಡತಕ್ಕದ್ದು,
2) ಏಕ ಮಧ್ಯಸ್ಥಿಕೆದಾರರ ನಿರ್ಣಯದಂತೆ ಹಣ ಪಾವತಿ ಮಾಡಲು ಗುತ್ತಿಗೆದಾರರಿಂದ ಬರಬೇಕಾದ ಕಾನೂನುಬದ್ಧವಾದ ಎಲ್ಲಾ ಬಾಕಿಗಳನ್ನು ಹೊಂದಾಣಿಕೆ ಮಾಡಿಕೊಳ್ಳಬೇಕು,
3) ಹಣ ಸಂದಾಯಕ್ಕೆ ಮೊದಲು ಮೂಲ ಗುತ್ತಿಗೆ ಕರಾರಿನಲ್ಲಿರುವ ಏಕಮಧ್ಯಸ್ಥಿಕೆ ಕಾಲಂನ್ನು ಪರಸ್ಪರ ಒಪ್ಪಿಗೆಯೊಂದಿಗೆ ಕೈಬಿಟ್ಟು ಮೇಲಿನ ಎಲ್ಲಾ ಅಂಶಗಳನ್ನು ಒಳಗೊಂಡಂತೆ ಸೂಕ್ತವಾದ ಪೂರಕ ಕರಾರನ್ನು ಗುತ್ತಿಗೆದಾರರಿಂದ ಪಡೆಯಬೇಕು,
2) ಈ ಉದ್ದೇಶಕ್ಕಾಗಿ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 4702–00–101–1–02–139 ಹೊಸಕೆರೆಗಳ ನಿರ್ಮಾಣ ಪ್ರಧಾನ ಕಾಮಗಾರಿಗಳು (ಯೋಜನೆ)ಅಡಿ 2009–10ನೇ ಸಾಲಿಗೆ ಒದಗಿಸಿರುವ ಅನುದಾನದಿಂದ ಭರಿಸುವುದು.
3) ಈ ಆದೇಶವನ್ನು ಕಾನೂನು ಇಲಾಖೆಯ ದಿನಾಂಕ:04/07/2007ರ ಟಿಪ್ಪಣಿ ಸಂಖ್ಯೆ: ಎಲ್‌ಎಡಬ್ಲ್ಯೂ 246 ಒಪಿಎನ್ 2007ರಲ್ಲಿ ನೀಡಿರುವ ಸಹಮತಿಯ ಪ್ರಕಾರ ಹಾಗೂ ಆದೇಶ ಸಂಖ್ಯೆ: ಎಫ್‌ಡಿ 21 ಟಿಎಫ್‌ಪಿ 2006, ದಿನಾಂಕ:02/09/2006ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1249

**ಕೆ. ಸುಧಾಕರ ಶೆಟ್ಟಿ,**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**ವಿಷಯ:** ಬಾಗಲಕೋಟೆ ಜಿಲ್ಲೆ, ಮುಧೋಳ ತಾಲ್ಲೂಕು, ಜಂಬಗಿ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸನೀಇ 02 ನಯೋಕಾ 2009, ದಿನಾಂಕ 05/02/09.

2. ದಿನಾಂಕ 27/02/09ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜೆಪಿ/ಎಇ–6/2008–09/1589.

3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ:ಮುಸದ/ಆಪ್ತಶಾಖೆ/ಟೆಂಡರ್/08–09/1336, ದಿನಾಂಕ 28/02/09.

**ಪ್ರಸ್ತಾವನೆ:**

ಬಾಗಲಕೋಟೆ ಜಿಲ್ಲೆ, ಮುಧೋಳ ತಾಲ್ಲೂಕು, ಜಂಬಗಿ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ 227.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 05/02/09ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| **1** | **ರಾಜ್ಯ ಟೆಂಡರ್ ಬುಲೆಟಿನ್** | **ದಿ:13/02/09** |
| **2** | **ವಿಜಯ ಕರ್ನಾಟಕ ಹಾಗೂ ಇಂಡಿಯನ್ ಎಕ್ಸ್‌ಪ್ರೆಸ್ ದಿನಪತ್ರಿಕೆಗಳು** | **ದಿ: 14/02/09** |

ಈ ಟೆಂಡರ್ ಕರೆಗೆ ಪ್ರತಿಕ್ರಿಯಿಸಿ ಖಾಲಿ ಟೆಂಡರ್ ಫಾರಂ ಪಡೆದ 5 ಜನ ಗುತ್ತಿಗೆದಾರರು ನಿಗದಿತ ದಿನದಂದು ಇಬ್ಬರು ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್‌ನ್ನು ದಿನಾಂಕ 25/02/09ರಂದು ತೆರೆಯಲಾಗಿ ಈ ಪೈಕಿ ಒಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್‌ನ್ನು ದಿನಾಂಕ 25/02/09ರಂದು ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| **ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ** | **ರೂ.2,49,63,565/–** |
| **ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ** | **ರೂ.2,40,32,096/–** |

| **ಕ್ರ.ಸಂ** | **ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್** | **ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ** | **ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ** | **ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ** |
|---|---|---|---|---|
| **1** | **ಜಿ.ಮಸ್ತಾನಯ್ಯ, 1ನೇ ದರ್ಜೆ ಗುತ್ತಿಗೆದಾರರು** | **ರೂ.2,90,31,716/–** | **16.29 ಹೆಚ್ಚು** | **20.80 ಹೆಚ್ಚು** |

ಮೇಲ್ಕಂಡಂತೆ ಶ್ರೀ ಮಸ್ತಾನಯ್ಯ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ (2,40,32,096–00) ಹೋಲಿಸಿದಾಗ ಶೇಕಡ 20.80ರಷ್ಟು ಹೆಚ್ಚಾಗಿದ್ದು, ಸದರಿಯವರ ರೂ.2,90,31,716–00ರ ಮೊತ್ತದ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 28/02/09ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ.2,40,32,096–00ಗಳ ಮೇಲೆ ಶೇಕಡ 14.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.2,75,16,750–00ಗಳಿಗೆ ಕಾಮಗಾರಿಯನ್ನು ಶ್ರೀ ಜಿ.ಮಸ್ತಾನಯ್ಯ 1ನೇ ದರ್ಜೆ ಗುತ್ತಿಗೆದಾರರು, ಬಿಜಾಪುರ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 15 ಅಪಿಬಂ 2009(2), ಬೆಂಗಳೂರು, ದಿನಾಂಕ 11ನೇ ಮೇ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆ, ಮುಧೋಳ ತಾಲ್ಲೂಕು, ಜಂಬಗಿ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ.2,40,32,096–00ಗಳ ಮೇಲೆ ಶೇಕಡ 14.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.2,75,16,750–00ಗಳಿಗೆ (ಎರಡು ಕೋಟಿ ಎಪ್ಪತ್ತೈದು ಲಕ್ಷದ ಹದಿನಾರು ಸಾವಿರದ ಏಳುನೂರ ಐವತ್ತು ರೂ.ಗಳು ಮಾತ್ರ) ಶ್ರೀ ಜಿ.ಮಸ್ತಾನಯ್ಯ, 1ನೇ ದರ್ಜೆ ಗುತ್ತಿಗೆದಾರರು, ಬಿಜಾಪುರ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1250 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ:** ಶಿವಮೊಗ್ಗ ಜಿಲ್ಲೆ, ಸಾಗರ ತಾಲ್ಲೂಕು, ಯಲಕುಂದ್ಲಿ ಗ್ರಾಮದ ಹತ್ತಿರ ಮಾವಿನ ಹೊಳೆಗೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸನೀಇ 10 ನಯೋಕಾ 2007, ದಿನಾಂಕ 29/01/09.

2. ದಿನಾಂಕ 28/02/09ರ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದ ಸಂಖ್ಯೆ:ಮುಸ(ದ)/ತಾಂ–3/ಸಇಂ–8/ಶಿವಮೊಗ್ಗ/ಟೆಂಡರ್/2008–09/1176.

3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ:ಮುಸದ/ಆಪ್ತ ಶಾಖೆ/ಟೆಂಡರ್/08–09/1336, ದಿನಾಂಕ 28/02/09.

**ಪ್ರಸ್ತಾವನೆ:**

ಹೆಚ್ಚಿನ ಆತ್ಮಹತ್ಯೆ ಪ್ರಕರಣಗಳು ವರದಿಯಾಗಿರುವ ರಾಜ್ಯದ ಜಿಲ್ಲೆಗಳಲ್ಲಿ ರೈತರ ಪುನರ್ವಸತಿಗಾಗಿ ವಿಶೇಷ ಪ್ಯಾಕೇಜ್‌ನಡಿ ಕಾಮಗಾರಿಗಳನ್ನು ಕೈಗೊಳ್ಳಲು ಮೇಲೆ (1)ರಲ್ಲಿ ಓದಲಾದ ದಿನಾಂಕ: 29/01/09ರ ಸರ್ಕಾರದ ಆದೇಶದಲ್ಲಿ ಅನುಮೋದನೆ ನೀಡಲಾಗಿದೆ. ಈ ಆದೇಶದಲ್ಲಿ 58.50 ಲಕ್ಷ ರೂ.ಗಳ ಅಂದಾಜು ಮೊತ್ತದಲ್ಲಿ ಸಾಗರ ತಾಲ್ಲೂಕು, ಯಲಕುಂದ್ಲಿ ಗ್ರಾಮದ ಹತ್ತಿರ ಮಾವಿನ ಹೊಳಗೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಮಾಡುವ ಕಾಮಗಾರಿ ಸಹ ಸೇರಿದೆ.

ಈ ಕಾಮಗಾರಿ ಕೈಗೊಳ್ಳಲು ಶಿವಮೊಗ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಶಿವಮೊಗ್ಗ ಜಿಲ್ಲಾ ಟೆಂಡರ್ ಬುಲೆಟಿನ್‌ನಲ್ಲಿ ದಿನ ಆಂಕ: 31/01/09ರಂದು ಹಾಗೂ ಕನ್ನಡಪ್ರಭ ದಿನಪತ್ರಿಕೆಯಲ್ಲಿ ದಿನಾಂಕ 10/02/09ರಂದು ಪ್ರಕಟಿಸಲಾಗಿದೆ.

ಈ ಟೆಂಡರ್ ಕರೆಗೆ ಪ್ರತಿಕ್ರಿಯಿಸಿ ಖಾಲಿ ಟೆಂಡರ್ ಫಾರಂ ಪಡೆದ 5 ಜನ ಗುತ್ತಿಗೆದಾರರಲ್ಲಿ ನಿಗಧಿತ ದಿನದಂದು ಇಬ್ಬರು ಗುತ್ತಿಗೆದಾರರು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ಟೆಂಡರ್‌ಗಳನ್ನು ದಿನಾಂಕ 24/02/09ರಂದು ತೆರೆಯಲಾಗಿದೆ. ಇದರಲ್ಲಿ ಅರ್ಹರಾಗಿದ್ದ ಇಬ್ಬರು ಗುತ್ತಿಗೆದಾರರ ಟೆಂಡರ್‌ಗಳಲ್ಲಿ ಅವರು ನಮೂದಿಸಿರುವ ವಿವರ ಕೆಳಕಂಡಂತಿದೆ:

| | |
|---|---|
| **ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ** | **ರೂ.49,72,415/–** |
| **ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ** | **ರೂ.49,57,140/–** |

| ಕ್ರ.ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| **1** | **ವೆಂಕಟೇಶ್ ಬಿ.ನಾಯಕ್, 1ನೇ ದರ್ಜೆ ಗುತ್ತಿಗೆದಾರರು,** | **ರೂ.59,42,550/–** | **19.51 ಹೆಚ್ಚು** | **19.88 ಹೆಚ್ಚು** |

| ಕ್ರ.ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br><br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 2 | ಡಿ.ಕೆ.ಸಿದ್ದೇಶ್ವರ ಪ್ರಸಾದ್, 1ನೇ ದರ್ಜೆ ಗುತ್ತಿಗೆದಾರರು, | ರೂ.63,24,921/– | 27.20 ಹೆಚ್ಚು | 27.59 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ:1ರಲ್ಲಿರುವ ಶ್ರೀ ವೆಂಕಟೇಶ್ ಬಿ.ನಾಯಕ್, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ.59,42,550–00ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 19.88ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2)ರಲ್ಲಿ ಓದಲಾದ ದಿನಾಂಕ 28/02/09ರ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳು ಹೆಚ್ಚೆಂದು ಕಂಡು ಬಂದ ಹಿನ್ನೆಲೆಯಲ್ಲಿ ಈ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 28/02/09ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಟೆಂಡರಿಗಿಡಲಾದ ಮೊತ್ತ ರೂ.49,57,140–00ಗಳ ಮೇಲೆ ಶೇಕಡ 14.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.56,51,140–00 ಗಳಿಗೆ ಕಾಮಗಾರಿಯನ್ನು ಶ್ರೀ ವೆಂಕಟೇಶ್ ಬಿ.ನಾಯಕ್, 1ನೇ ದರ್ಜೆ ಗುತ್ತಿಗೆದಾರರು, ಸಾಗರ ಇವರಿಗೆ ವಹಿಸಲು ಸಭೆಯಲ್ಲಿ ನಿರ್ಧರಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 49 ಮಸಾವಿ 2009, ಬೆಂಗಳೂರು, ದಿನಾಂಕ 11ನೇ ಮೇ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆ, ಸಾಗರ ತಾಲ್ಲೂಕು ಯಲಕುಂದ್ಲಿ ಗ್ರಾಮದ ಹತ್ತಿರ ಮಾವಿನ ಹೊಳೆಗೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಟೆಂಡರಿಗೆ ಇಡಲಾದ ಮೊತ್ತ ರೂ.49,57,140–00ಗಳ ಮೇಲೆ ಶೇಕಡ 14.00 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.56,51,140–00 ಗಳಿಗೆ (ಐವತ್ತಾರು ಲಕ್ಷದ ಐವತ್ತೊಂದು ಸಾವಿರದ ನೂರ ನಲವತ್ತು ರೂ.ಗಳು ಮಾತ್ರ) ಶ್ರೀ ವೆಂಕಟೇಶ್ ಬಿ.ನಾಯಕ್, 1ನೇ ದರ್ಜೆ ಗುತ್ತಿಗೆದಾರರು, ಸಾಗರ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1251 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ:** ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು ಜಾಜೂರು ಕೆರೆಗೆ ಅಣೆಕಟ್ಟು ಮತ್ತು ಪೂರಕ ಕಾಲುವೆ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸನೀಇ 10 ನಯೋಕಾ 2007, ದಿನಾಂಕ 13/05/08.

2. ದಿನಾಂಕ 12/03/09ರ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದ ಸಂಖ್ಯೆ:ಮುಸ(ದ)/ತಾಂ–4/ಸಇಂ–9/2007/ 1625.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ:ಮುಸದ/ಆಪ್ತ ಶಾಖೆ/ಟೆಂಡರ್/08–09/1744, ದಿನಾಂಕ 01/04/09.

**ಪ್ರಸ್ತಾವನೆ:**

ಹೆಚ್ಚಿನ ಆತ್ಮಹತ್ಯೆ ಪ್ರಕರಣಗಳು ವರದಿಯಾಗಿರುವ ರಾಜ್ಯದ ಜಿಲ್ಲೆಗಳಲ್ಲಿ ರೈತರ ಪುರ್ನವಸತಿಗಾಗಿ ವಿಶೇಷ ಪ್ಯಾಕೇಜ್‌ನಡಿ ಕಾಮಗಾರಿಗಳನ್ನು ಕೈಗೊಳ್ಳಲು ಮೇಲೆ (1)ರಲ್ಲಿ ಓದಲಾದ ದಿನಾಂಕ: 13/05/08ರ ಸರ್ಕಾರದ ಆದೇಶದಲ್ಲಿ ಅನುಮೋದನೆ ನೀಡಲಾಗಿದೆ. ಈ ಆದೇಶದಲ್ಲಿ 518.00 ಲಕ್ಷ ರೂ.ಗಳ ಅಂದಾಜು ಮೊತ್ತದಲ್ಲಿ ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು ಜಾಜೂರು ಕೆರೆಗೆ ಅಣೆಕಟ್ಟು ಮತ್ತು ಪೂರಕ ಕಾಲುವೆ ನಿರ್ಮಾಣ ಮಾಡುವ ಕಾಮಗಾರಿ ಸಹ ಸೇರಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಚಿತ್ರದುರ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಪ್ರಜಾವಾಣಿ ಹಾಗೂ ಉದಯವಾಣಿ ದಿನಪತ್ರಿಕೆ | ದಿ:17/07/2008 |
| 2 | ಚಿತ್ರದುರ್ಗ ಜಿಲ್ಲಾ ಟೆಂಡರ್ ಬುಲೆಟಿನ್ | ದಿ:19/07/2008 |
| 3 | ರಾಜ್ಯ ಟೆಂಡರ್ ಬುಲೆಟಿನ್ | ದಿ:24/07/2008 |

ಕಾರಣಾಂತರಗಳಿಂದ ಈ ಅಧಿಸೂಚನೆಯನ್ನು ಹಲವಾರು ಬಾರಿ ಮುಂದೂಡಿ ಅಂತಿಮವಾಗಿ ದಿನಾಂಕ 29/01/09ರಂದು ಅವಧಿ ವಿಸ್ತರಣಾ ಅಧಿಸೂಚನೆ ಹೊರಡಿಸಲಾಗಿದೆ. ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 27 ಜನ ಗುತ್ತಿಗೆದಾರರಲ್ಲಿ ನಿಗದಿತ ದಿನದಂದು 3 ಜನ ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್‌ನ್ನು ದಿನಾಂಕ 02/03/09ರಂದು ತೆರೆಯಲಾಗಿದೆ. ಇದರಲ್ಲಿ ಅರ್ಹರಾಗಿದ್ದ ಇಬ್ಬರು ಗುತ್ತಿಗೆದಾರರ ಆರ್ಥಿಕ ಬಿಡ್‌ಗಳನ್ನು ತೆರೆಯಲಾಗಿದ್ದು, ಇದರಲ್ಲಿ ಅವರುಗಳು ನಮೂದಿಸಿರುವ ವಿವರ ಕೆಳಕಂಡಂತಿದೆ:

| | |
|---|---|
| **ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ** | **ರೂ.4,53,44,361/–** |
| **ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ** | **ರೂ.4,51,82,.104/–** |

| **ಕ್ರ.ಸಂ** | **ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br><br>ಶ್ರೀ/ಮೆಸರ್ಸ್** | **ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ** | **ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ** | **ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ** |
|---|---|---|---|---|
| **1** | **ಬಿ.ಹೆಚ್. ಕೃಷ್ಣಾರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು** | **ರೂ.5,52,62,422/–** | **21.67 ಹೆಚ್ಚು** | **22.31 ಹೆಚ್ಚು** |
| **2** | **ಪಿ.ಕೆ. ಶಿವರಾಂ, 1ನೇ ದರ್ಜೆ ಗುತ್ತಿಗೆದಾರರು** | **ರೂ.5,52,75,998/–** | **21.90 ಹೆಚ್ಚು** | **22.34 ಹೆಚ್ಚು** |

ಮೇಲ್ಕಂಡಂತೆ ಕ್ರ.ಸಂ:1ರಲ್ಲಿರುವ ಶ್ರೀ ಬಿ.ಹೆಚ್. ಕೃಷ್ಣಾರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ.5,52,62,422–00ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 22.31ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2)ರಲ್ಲಿ ಓದಲಾದ ದಿನಾಂಕ 12/03/09ರ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳು ಹೆಚ್ಚೆಂದು ಕಂಡು ಬಂದ ಹಿನ್ನೆಲೆಯಲ್ಲಿ ಈ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 23/03/09ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಟೆಂಡರಿಗಿಡಲಾದ ಮೊತ್ತ ರೂ.4,51,82,104–00ಗಳ ಮೇಲೆ ಶೇಕಡ 14.25ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.5,16,20,554–00ಗಳಿಗೆ ಕಾಮಗಾರಿಯನ್ನು ಶ್ರೀ ಬಿ.ಹೆಚ್.ಕೃಷ್ಣಾರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು, ಬೆಂಗಳೂರು ಇವರಿಗೆ ವಹಿಸಲು ಸಭೆಯಲ್ಲಿ ನಿರ್ಧರಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 20 ಅಪಿಬಂ 2009, ಬೆಂಗಳೂರು, ದಿನಾಂಕ 11ನೇ ಮೇ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು ಜಾಜೂರು ಕೆರೆಗೆ ಅಣೆಕಟ್ಟು ಮತ್ತು ಪೂರಕ ಕಾಲುವೆ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ

ದರಪಟ್ಟಿಯಂತೆ ಟೆಂಡರಿಗೆ ಇಡಲಾದ ಮೊತ್ತ ರೂ.4,51,82,104–00ಗಳ ಮೇಲೆ ಶೇಕಡ 14.25ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.5,16,20,554–00ಗಳಿಗೆ (ಐದು ಕೋಟಿ ಹದಿನಾರು ಲಕ್ಷದ ಇಪ್ಪತ್ತು ಸಾವಿರದ ಐನೂರ ಐವತ್ತಾ್ನಲ್ಕು ರೂ.ಗಳು ಮಾತ್ರ) ಶ್ರೀ ಬಿ.ಹೆಚ್. ಕೃಷ್ಣಾರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು, ಬೆಂಗಳೂರು ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1252 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ:** ಬಿಜಾಪುರ ಜಿಲ್ಲೆ, ಇಂಡಿ ತಾಲ್ಲೂಕು, ಹಾವಿನಾಳ ಹತ್ತಿರ ಬೋರಿ ನಾಲಾಕ್ಕೆ ಸೇತುವೆ ಸಹಿತ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸನೀಇ 02 ನಯೋಕಾ 2009, ದಿನಾಂಕ 05/02/09.
2. ದಿನಾಂಕ 27/02/09ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ:ಮುಇಣ/ಸನೀ(ಉ)ವ/ಬಿಜೆಪಿ/ಪಿಬಿ–9/ ಹಾವಿನಾಳ ಸೇತುವೆ ಸಹಿತ ಬ್ಯಾರೇಜ್/ 2008–09/1588.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ:ಮುಸದ/ಆಪ್ತಶಾಖೆ/ಟೆಂಡರ್/ 08–09/1336, ದಿನಾಂಕ 28/02/09.

**ಪ್ರಸ್ತಾವನೆ:**

ಬಿಜಾಪುರ ಜಿಲ್ಲೆ, ಇಂಡಿ ತಾಲ್ಲೂಕು, ಹಾವಿನಾಳ ಹತ್ತಿರ ಬೋರಿನಾಲಾಕ್ಕೆ ಸೇತುವೆ ಸಹಿತ ಬ್ಯಾರೇಜ್ ನಿರ್ಮಾಣ ಮಾಡುವ ಕಾಮಗಾರಿಯ 226.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 05/02/09ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ರಾಜ್ಯ ಟೆಂಡರ್ ಬುಲೆಟಿನ್ | ದಿ:13/02/09 |
| 2 | ವಿಜಯ ಕರ್ನಾಟಕ ಹಾಗೂ ಇಂಡಿಯನ್ ಎಕ್ಸ್‌ಪ್ರೆಸ್ ದಿನಪತ್ರಿಕೆಗಳು | ದಿ: 14/02/09 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 8 ಜನ ಗುತ್ತಿಗೆದಾರರಲ್ಲಿ ನಿಗದಿತ ದಿನದಂದು ಇಬ್ಬರು ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್‌ನ್ನು ದಿನಾಂಕ 25/02/09ರಂದು ತೆರೆಯಲಾಗಿ ಈ ಪೈಕಿ ಒಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್‌ನ್ನು ಅಂದೇ ತೆರೆಯಲಾಗಿರುತ್ತದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ.2,02,54,454/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ.1,97,22,665/– |

| ಕ್ರ.ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ಜಿ.ಮಸ್ತಾನಯ್ಯ,<br>1ನೇ ದರ್ಜೆ ಗುತ್ತಿಗೆದಾರರು | ರೂ.2,33,94,961/– | 15.50 ಹೆಚ್ಚು | 18.62 ಹೆಚ್ಚು |

ಮೇಲ್ಕಂಡಂತೆ ಶ್ರೀ ಮಸ್ತಾನಯ್ಯ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ (1,19,22,665–00) ಹೋಲಿಸಿದಾಗ ಶೇಕಡ 18.62ರಷ್ಟು ಹೆಚ್ಚಾಗಿದ್ದು, ಸದರಿಯವರ ರೂ.2,33,49,961–00ರ ಮೊತ್ತದ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 28/02/09ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ.1,97,22,665–00ಗಳ ಮೇಲೆ ಶೇಕಡ 14.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.2,25,82,451–00ಗಳಿಗೆ ಕಾಮಗಾರಿಯನ್ನು ಶ್ರೀ ಜಿ.ಮಸ್ತಾನಯ್ಯ, 1ನೇ ದರ್ಜೆ ಗುತ್ತಿಗೆದಾರರು, ಬಿಜಾಪುರ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 15 ಅಪಿಬಂ 2009(1), ಬೆಂಗಳೂರು, ದಿನಾಂಕ 11ನೇ ಮೇ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆ, ಇಂಡಿ ತಾಲ್ಲೂಕು, ಹಾವಿನಾಳ ಹತ್ತಿರ ಬೋರಿನಾಲಾಕ್ಕೆ ಸೇತುವೆ ಸಹಿತ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ.1,97,22,665–00ಗಳ ಮೇಲೆ ಶೇಕಡ 14.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.2,25,82,451–00ಗಳಿಗೆ (ಎರಡು ಕೋಟಿ ಇಪ್ಪತ್ತೈದು ಲಕ್ಷದ ಎಂಭತ್ತೆರಡು ಸಾವಿರದ ನಾನೂರ ಐವತ್ತೊಂದು ರೂ.ಗಳು ಮಾತ್ರ) ಶ್ರೀ ಜಿ.ಮಸ್ತಾನಯ್ಯ, 1ನೇ ದರ್ಜೆ ಗುತ್ತಿಗೆದಾರರು, ಬಿಜಾಪುರ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1253

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಒಳಾಡಳಿತ ಸಚಿವಾಲಯ

### ತಿದ್ದೋಲೆ

**ಸಂಖ್ಯೆ: ಒಇ 70 ಪೊಸಿಅ 2009, ಬೆಂಗಳೂರು, ದಿನಾಂಕ: 6ನೇ ಮೇ 2009**

ಸರ್ಕಾರದ ಆದೇಶ ಸಂಖ್ಯೆ: ಒಇ 219 ಪೊಸಿಅ 2007 ದಿ:10.03.2008ರ ಆದೇಶ ಭಾಗದ ಅಂಶ–2. "ಈ ಆದೇಶವು ಶಿಸ್ತು ಪ್ರಾಧಿಕಾರ ಹೊರಡಿಸಿದ ಆದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ" ಎಂಬುದರ ಬದಲಾಗಿ "ಇವರು ಸೇವೆಯಿಂದ ವಜಾ ಹೊಂದಿ, ಸೇವೆಗೆ ಪುನರ್‌ನೇಮಕ ಮಾಡುವ ವರೆಗಿನ ಅವಧಿಯನ್ನು ಲೆಕ್ಕಕ್ಕಿಲ್ಲದ ಅವಧಿ [Dies-Non]" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1254

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಚ್.ಎಸ್.ಪರಮೇಶ್ವರ, ಪೊಲೀಸ್ ಇನ್ಸ್‌ಪೆಕ್ಟರ್, ಬಸವೇಶ್ವರ ನಗರ ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ:ಸಿಬಿ(8) 17/2007–08 ದಿ:20–02–2008.

2) ಅರ್ಜಿದಾರರ ಮೇಲ್ಮನವಿ ಅರ್ಜಿ ದಿನಾಂಕ:30–04–08.

3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8) 17/2007–08 ದಿ:05–02–2009.

**ಪ್ರಸ್ತಾವನೆ:**

ಶ್ರೀ ಎಚ್.ಎಸ್.ಪರಮೇಶ್ವರ, ಪೊಲೀಸ್ ಇನ್ಸ್‌ಪೆಕ್ಟರ್, ಬಸವೇಶ್ವರ ಪೊಲೀಸ್ ಠಾಣೆ, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಸಿಂಧನೂರು ಪೊಲೀಸ್ ಠಾಣೆಯಲ್ಲಿ ಪೊಲೀಸ್ ಸಬ್–ಇನ್ಸ್‌ಪೆಕ್ಟರ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಬೇಜವಾಬ್ದಾರಿತನ, ಅಧಿಕಾರ ದುರುಪಯೋಗ, ಅತೀವ ನಿರ್ಲಕ್ಷತನ ಮತ್ತು ಕರ್ತವ್ಯಲೋಪ ಎಸಗಿರುವ ಆರೋಪದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:–**

"ಶ್ರೀ ಎಚ್.ಎಸ್.ಪರಮೇಶ್ವರ, ಪೊಲೀಸ್ ಇನ್ಸ್‌ಪೆಕ್ಟರ್, ಹಾಲಿ ಸಿ.ಓ.ಡಿ. ಬೆಂಗಳೂರು, ಆದ ನೀವು ಸಿಂಧನೂರು ನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ವಾರಸು ದಾರರಿಲ್ಲದ ದ್ವಿಚಕ್ರ ವಾಹನಗಳನ್ನು ವಶಪಡಿಸಿಕೊಂಡು ಅವುಗಳನ್ನು ಪಿ.ಎಫ್.ಗೆ ಅಳವಡಿಸದೇ, ನಿಯಮಗಳನ್ನು ಪಾಲಿಸದೆ, ನ್ಯಾಯಾಲಯದ ಪರವಾನಗಿ ಇಲ್ಲದೇ ಸದರಿ ದ್ವಿಚಕ್ರ ವಾಹನಗಳನ್ನು ಅನಧಿಕೃತವಾಗಿ ಸಿಬ್ಬಂದಿಗಳಿಗೆ ಉಪಯೋಗಪಡಿಸಿ ಕೊಳ್ಳಲು ನೀಡಿದ್ದಲ್ಲದೆ, ಅವರುಗಳು ವರ್ಗಾವಣೆಗೊಂಡು ಹೋದಾಗ ಸದರಿ ವಾಹನಗಳನ್ನು ಠಾಣೆಯಲ್ಲಿ ಜಮಾ ಮಾಡದೇ ತಮ್ಮೊಂದಿಗೆ ತಮ್ಮ ಸ್ವಂತ ಕೆಲಸಕ್ಕಾಗಿ ಉಪಯೋಗಿಸಲು ತೆಗೆದುಕೊಂಡು ಹೋಗಲು ಕಾರಣರಾಗುವ ಮೂಲಕ ತಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ, ಬೇಜವಾಬ್ದಾರಿತನ, ಅಧಿಕಾರ ದುರುಪಯೋಗ ಮತ್ತು ಕರ್ತವ್ಯ ಲೋಪ ಎಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 20–02–2008ರ ಆದೇಶದಲ್ಲಿ "ಇವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಒಂದು ವರ್ಷಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ."

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರು ನಿಯಮಬಾಹಿರವಾಗಿ ನಡೆದುಕೊಂಡಿರುವುದು ಸಾಕ್ಷಾಧಾರಗಳಿಂದ ಸಾಬೀತಾಗಿದ್ದು, ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 198 ಪೊಸಿಅ 2008 ಬೆಂಗಳೂರು, ದಿನಾಂಕ: 20ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಚ್.ಎಸ್.ಪರಮೇಶ್ವರ, ಪೊಲೀಸ್ ಇನ್ಸ್‌ಪೆಕ್ಟರ್, ಬಸವೇಶ್ವರ ನಗರ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1255

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಸ್.ಕೆ.ಧನುಶೇಖರ್, ಪಿ.ಸಿ.–890, 'ಬಿ'ದಳ, 7ನೇ ಪಡೆ, ಕೆ.ಎಸ್.ಆರ್.ಪಿ., ಮಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ:ಡಿಇ/33/2004–05 ದಿನಾಂಕ:17–04–2007

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ:ಅಪೀಲು (6)39/2007–08 ಓ.ಬಿ:76/2007–08 ದಿ:05.11.2007

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:08–04–08

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು (2)16/2008–09 ದಿ:24–07–2008

5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 144 ಸಿಎನ್‌ಎಸ್ 08 ದಿನಾಂಕ: 30.03.2009.

**ಪ್ರಸ್ತಾವನೆ:**

ಶ್ರೀ ಎಸ್.ಕೆ.ಧನುಶೇಖರ್, ಪಿ.ಸಿ.–890, 'ಬಿ'ದಳ, 7ನೇ ಪಡೆ, ಕೆ.ಎಸ್.ಆರ್.ಪಿ., ಮಂಗಳೂರು, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು 5ನೇ ಪಡೆ ಮೈಸೂರಿನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಅಶಿಸ್ತು, ತೀವ್ರ ದುರ್ವರ್ತನೆ ಪ್ರದರ್ಶಿಸಿದ ಕಾರಣದ ಮೇಲೆ ಇನ್ನೋರ್ವ ಸಿಬ್ಬಂದಿಯೊಂದಿಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ಮತ್ತು 8ರಡಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:–**

I. ಶ್ರೀ ಎಸ್.ಕೆ.ಧನುಶೇಖರ್, ಪಿ.ಸಿ.–890, 'ಬಿ'ದಳ, 5ನೇ ಪಡೆ, ಕೆ.ಎಸ್.ಆರ್.ಪಿ., ಮೈಸೂರು, ಆದ ನೀವು ಶ್ರೀ.ಹನುಮಂತಯ್ಯ, ಆರ್.ಪಿ.ಐ., 5ನೇ ಪಡೆ ಕೆ.ಎಸ್.ಆರ್.ಪಿ., ಮೈಸೂರು ಇವರಿಗೆ ವಿಜಯಾ ಬ್ಯಾಂಕ್, ನಜರ್‌ಬಾದ್ ಶಾಖೆ, ಮೈಸೂರು, ಇಲ್ಲಿ ಕ್ರಮವಾಗಿ 2001ರಲ್ಲಿ ರೂ.50,000–00 ಮತ್ತು 2003ರಲ್ಲಿ ರೂ.1,00,000–00 ಸಾಲವನ್ನು ಕೊಡಿಸಿ ಕ್ರಮವಾಗಿ ದಾಖಲೆಗಳಿಗಾಗಿ ರೂ.1,300–00 ಮತ್ತು 5,000–00 ಕಮೀಷನ್ ಹಾಗೂ ದಾಖಲೆಗಳಿಗಾಗಿ ರೂ.1,300–00 ಮತ್ತು 10,000–00 ಕಮೀಷನ್ ಪಡೆದುಕೊಂಡು ನಿಮ್ಮ ಅಧಿಕಾರ ವ್ಯಾಪ್ತಿ ಮೀರಿ ಬ್ಯಾಂಕುಗಳಲ್ಲಿ ಸಾಲ ಕೊಡಿಸುವ ಮೂಲಕ ತೀವ್ರ ದುರ್ವರ್ತನೆ ಮತ್ತು ಅಶಿಸ್ತು ಪ್ರದರ್ಶಿಸಿರುತ್ತೀರಿ.

II. ಶ್ರೀ ಎಸ್.ಕೆ.ಧನುಶೇಖರ್, ಪಿ.ಸಿ.–890, 'ಬಿ'ದಳ, 5ನೇ ಪಡೆ, ಕೆ.ಎಸ್.ಆರ್.ಪಿ., ಮೈಸೂರು, ಆದ ನೀವು ಶ್ರೀ.ರಾಮಕೃಷ್ಣೇಗೌಡ, ಹವ.–156, ಇವರಿಗೆ ವಿಜಯಾ ಬ್ಯಾಂಕ್, ನಜರ್‌ಬಾದ್, ಮೈಸೂರು ಇಲ್ಲಿ 1998 ರಲ್ಲಿ ರೂ.35,000–00ಗಳ ಸಾಲ ಕೊಡಿಸಿ ರೂ.5,000–00 ಕಮೀಷನ್ ಹಣವನ್ನು ಅಕ್ರಮವಾಗಿ ಪಡೆದಿರುತ್ತೀರಿ ಮತ್ತು ಸದರಿ ಶ್ರೀ.ರಾಮಕೃಷ್ಣೇಗೌಡ ಇವರಿಗೆ ಶೇಕಡಾ 10ರ ಬಡ್ಡಿ ದರದಲ್ಲಿ ರೂ.10,000–00ಗಳ ಸಾಲ ನೀಡಿದ್ದು, ತಮ್ಮ ಅಧಿಕಾರ ವ್ಯಾಪ್ತಿ ಮೀರಿ ವರ್ತಿಸಿರುವುದಲ್ಲದೆ, ಕೆ.ಸಿ.ಎಸ್. (ಕಂಡಕ್ಟ್) ನಿಯಮಾವಳಿಗಳು 1966ರ ನಿಯಮ 21ನ್ನು ಉಲ್ಲಂಘಿಸಿ ತೀವ್ರ ದುರ್ವರ್ತನೆ ಪ್ರದರ್ಶಿಸಿರುತ್ತೀರಿ.

III. ಶ್ರೀ ಎಸ್.ಕೆ.ಧನುಶೇಖರ್, ಪಿ.ಸಿ.–890, 'ಬಿ'ದಳ, 5ನೇ ಪಡೆ, ಕೆ.ಎಸ್.ಆರ್.ಪಿ., ಮೈಸೂರು, ಆದ ನೀವು ಶ್ರೀ.ಹನುಮಂತಯ್ಯ, ಆರ್.ಪಿ.ಐ., ಶ್ರೀ.ಆರ್.ರಾಮಚಂದ್ರ, ಹವ.–117 ಇವರುಗಳಿಗೆ ಮತ್ತು ಇವರ ಕುಟುಂಬ ದವರಿಗೆ ದೂರವಾಣಿ ಮೂಲಕ ಬೆದರಿಕೆ ಹಾಕಿ ತೀವ್ರ ದುರ್ವರ್ತನೆ ಮತ್ತು ಅಶಿಸ್ತು ಪ್ರದರ್ಶಿಸಿರುತ್ತೀರಿ.

IV. ಶ್ರೀ ಎಸ್.ಕೆ.ಧನುಶೇಖರ್, ಪಿ.ಸಿ.–890, 'ಬಿ'ದಳ, 5ನೇ ಪಡೆ, ಕೆ.ಎಸ್.ಆರ್.ಪಿ., ಮೈಸೂರು, ಆದ ನೀವು ಶ್ರೀ.ಟಿ.ಎ.ಸುರೇಶ, ಪಿ.ಸಿ.–725, 'ಇ' ದಳ, 5ನೇ ಪಡೆ, ಕೆ.ಎಸ್.ಆರ್.ಪಿ., ಮೈಸೂರು ಇವರಿಗೆ ಕಾನ್‌ಸ್ಟೇಬಲ್ ಕೆಲಸ ಕೊಡಿಸುವುದಾಗಿ ಹೇಳಿ 1999ರಲ್ಲಿ ರೂ.60,000–00 ಗಳನ್ನು ಅಕ್ರಮವಾಗಿ ಪಡೆದುಕೊಂಡಿರುತ್ತೀರಿ. ತನ್ಮೂಲಕ ಕಾನೂನು ಬಾಹಿರ ಚಟುವಟಿಕೆಯಲ್ಲಿ ತೊಡಗಿ ತೀವ್ರ ಅಶಿಸ್ತು ಮತ್ತು ದುರ್ನಡತೆ ಪ್ರದರ್ಶಿಸಿರುತ್ತೀರಿ.

V. ಶ್ರೀ ಎಸ್.ಕೆ.ಧನುಶೇಖರ್, ಪಿ.ಸಿ.–890, 'ಬಿ'ದಳ, 5ನೇ ಪಡೆ, ಕೆ.ಎಸ್.ಆರ್.ಪಿ., ಮೈಸೂರು, ಆದ ನೀವು ಶ್ರೀ.ಟಿ.ಎ.ಸುರೇಶ, ಪಿಸಿ–725 ಇವರಿಂದ ವಿಜಯಾ ಬ್ಯಾಂಕ್‌ನ ಲೋನ್ ಫಾರ್ಮ್ ಮತ್ತು ವಿತ್‌ಡ್ರಾ ಫಾರಂ ಮೇಲೆ ಸಹಿ ಮಾಡಿಸಿಕೊಂಡು ರೂ.30,000–00ಗಳನ್ನು ಅಕ್ರಮವಾಗಿ ನೀವೇ ತೆಗೆದುಕೊಂಡಿರುತ್ತೀರಿ.

VI. ಶ್ರೀ ಎಸ್.ಕೆ.ಧನುಶೇಖರ್, ಪಿ.ಸಿ.–890, 'ಬಿ'ದಳ, 5ನೇ ಪಡೆ, ಕೆ.ಎಸ್.ಆರ್.ಪಿ., ಮೈಸೂರು, ಆದ ನೀವು ಅನಿತ ಎನ್ನುವ ಹೆಣ್ಣು ಮಗಳನ್ನು ಶ್ರೀ.ಟಿ.ಎ.ಸುರೇಶ, ಪಿಸಿ–725 ಇವರ ವಿರುದ್ಧ ಎತ್ತಿಕಟ್ಟಿ ಸದರಿ ಹೆಣ್ಣುಮಗಳು ಮಾನನಷ್ಟ ಮೊಕದ್ದಮೆ ಹೂಡಿದ್ದು, 3 ಲಕ್ಷ ರೂಪಾಯಿಗಳನ್ನು ಕೊಟ್ಟರೆ ಆ ಕೇಸನ್ನು ವಾಪಸ್ ತೆಗೆದುಕೊಳ್ಳುವು ದಾಗಿಯೂ, ವೃತ್ತ ಪತ್ರಿಕೆ ಮತ್ತು ಕ್ರೈಂ ಸ್ಟೋರಿಯಲ್ಲಿ ಹಾಕಿಸುವುದಾಗಿ ಸದರಿ ಸುರೇಶ್ ರವರಿಗೆ ಬೆದರಿಕೆ ಹಾಕಿ ತೀವ್ರ ದುರ್ವರ್ತನೆ ಪ್ರದರ್ಶಿಸಿದ್ದೀರಿ.

VII. ಶ್ರೀ ಎಸ್.ಕೆ.ಧನುಶೇಖರ್, ಪಿ.ಸಿ.–890, 'ಬಿ' ದಳ, 5ನೇ ಪಡೆ, ಕೆ.ಎಸ್.ಆರ್.ಪಿ., ಮೈಸೂರು, ಆದ ನೀವು ಶ್ರೀ.ಎಂ.ಎ.ಭೋಪಯ್ಯ, ನಿವೃತ್ತ ಹವಲ್ದಾರ್ ಇವರಿಗೆ ವಳ್ಳಿ ಫೈನಾನ್ಸ್‌ನಿಂದ ಶೇಕಡಾ 10ರ ಬಡ್ಡಿ ದರದಲ್ಲಿ ರೂ.40,000–00 ಸಾಲ ಕೊಡಿಸಿದ್ದು, ಆ ಮೊತ್ತದಲ್ಲಿ ಕೇವಲ ರೂ.20,000–00 ಗಳನ್ನು ನೀಡಿ ಉಳಿದ ಹಣವನ್ನು ಬಿಡಿಬಿಡಿಯಾಗಿ ಕೊಟ್ಟು ತೊಂದರೆ ಮಾಡಿರುತ್ತೀರಿ. ಸದರಿ ಎಂ.ಎ.ಭೋಪಯ್ಯ ಇವರಿಗೆ ಅವರ ಸಹಿಯನ್ನು ಬಿಳಿ ಕಾಗದದ ಮೇಲೆ ಪಡೆದುಕೊಂಡು ರೂ.1,000–00 ಗಳನ್ನು ಕೊಟ್ಟು ರೂ.10,000–00 ವಸೂಲು ಮಾಡಿದ್ದೀರಿ. ಸದರಿಯವರಿಗೆ ಜಿ.ಪಿ.ಎಫ್.ನಿಂದ ಬಂದ ರೂ.20,000–00 ಗಳಲ್ಲಿ ರೂ.10,000–00

ಗಳನ್ನು ಕಡಿತಗೊಳಿಸಿ ನೀವು ಪಡೆದುಕೊಂಡಿರುತ್ತೀರಿ. ತನ್ಮೂಲಕ ನೀವು ಅಕ್ರಮ, ವಂಚನೆಯಂತಹ ಕೃತ್ಯಗಳಲ್ಲಿ ತೊಡಗಿದ್ದೀರಿ.

VIII. ಶ್ರೀ ಎಸ್.ಕೆ.ಧನುಶೇಖರ್, ಪಿ.ಸಿ.–890, 'ಬಿ'ದಳ, 5ನೇ ಪಡೆ, ಕೆ.ಎಸ್.ಆರ್.ಪಿ., ಮೈಸೂರು, ಆದ ನೀವು 5ನೇ ಪಡೆ, ಕೆ.ಎಸ್.ಆರ್.ಪಿ. ಸಿಬ್ಬಂದಿಗಳಿಗೆ ಪ್ರತಿ ಮಾಹೆ ಶೇಕಡಾ 5 ರಿಂದ 10ರ ವರೆಗೆ ಬಡ್ಡಿ ಸಾಲ ನೀಡುತ್ತಿದ್ದು, ಇದರ ವಸೂಲಿಗಾಗಿ ವಸತಿ ವಲಯಕ್ಕೆ ವಾಹನಗಳಲ್ಲಿ ಸ್ಥಳೀಯ ರೌಡಿಗಳನ್ನು ಕರೆತಂದು ವಸತಿ ವಲಯದಲ್ಲಿ ಭಯಭೀತಿ ವಾತಾವರಣ ಸೃಷ್ಟಿಸುತ್ತಾ, ಬೆದರಿಕೆ ಒಡ್ಡಿ ತೀವ್ರ ದುರ್ನಡತೆ ಪ್ರದರ್ಶಿಸಿದ್ದೀರಿ.

IX. ಶ್ರೀ ಎಸ್.ಕೆ.ಧನುಶೇಖರ್, ಪಿ.ಸಿ.–890, 'ಬಿ'ದಳ, 5ನೇ ಪಡೆ, ಕೆ.ಎಸ್.ಆರ್.ಪಿ., ಮೈಸೂರು, ಆದ ನೀವು 5ನೇ ಪಡೆಯ ಅಡಿಗೆ ಯವರನ್ನು ಬಳಸಿಕೊಂಡು ಖಾಸಗಿ ಮದುವೆ, ಹುಟ್ಟುಹಬ್ಬದಂತಹ ಕಾರ್ಯಕ್ರಮಗಳಿಗೆ ಅಡಿಗೆ ಸಿದ್ಧತೆ ಮಾಡಿ ಪೂರೈಸುತ್ತಾ ಸರ್ಕಾರಿ ನೌಕರರನ್ನು ನಿಮ್ಮ ಸ್ವಂತ ಕೆಲಸಕ್ಕೆ ದುರುಪಯೋಗಪಡಿಸಿಕೊಂಡಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿಲ್ಲ ಎಂದು ಸಲ್ಲಿಸಿದ ವರದಿಯನ್ನು ಶಿಸ್ತುಪ್ರಾಧಿಕಾರವು ಒಪ್ಪದೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:17–04–2007ರ ಆದೇಶದಲ್ಲಿ "ಅರ್ಜಿದಾರರ ವೇತನವನ್ನು ಪಿ.ಸಿ. ಹುದ್ದೆಯ ಕನಿಷ್ಠ ವೇತನಕ್ಕೆ ಮೂರು ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಇಳಿಸಲಾಗಿದೆ, ಸದರಿಯವರು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ ಆದೇಶಿಸಿದೆ."

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:05–11–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇವರ ವಿರುದ್ಧದ ಆರೋಪವು ಸಂಪೂರ್ಣವಾಗಿ ಸಾಬೀತಾಗಿರದ ಕಾರಣ ಅರ್ಜಿದಾರರಿಗೆ ವಿಧಿಸಿದ ದಂಡನೆಯು ಅಧಿಕವಾಗಿದೆ ಎಂದು ಪರಿಗಣಿಸಿ ಈ ಕುರಿತು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಓದಲಾದ (5)ರ ಪತ್ರದಲ್ಲಿ ಪಡೆದು, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 250 ಪೊಸಿಅ 2008 ಬೆಂಗಳೂರು, ದಿನಾಂಕ: 21ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಕೆ.ಧನುಶೇಖರ್, ಪಿ.ಸಿ.–890, 'ಬಿ'ದಳ, 7ನೇ ಪಡೆ, ಕೆ.ಎಸ್.ಆರ್.ಪಿ., ಮಂಗಳೂರು, ಇವರಿಗೆ ಶಿಸ್ತು ಪ್ರಾಧಿಕಾರವು ದಿ:17–04–07ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಭಾಗಶ: ಮಾರ್ಪಡಿಸಿ, ಇವರ ವೇತನವನ್ನು ಪಿ.ಸಿ. ಹುದ್ದೆಯ ಕನಿಷ್ಠ ವೇತನಕ್ಕೆ ಎರಡು ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಇಳಿಸಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1256

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಜಯಕುಮಾರ್, ಸಿ.ಪಿ.ಸಿ.–2124, ಕಾಪು ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಉಡುಪಿ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ(3)/ಇವಿ/5:ಉಜಿ/2004 ದಿನಾಂಕ:19–12–2005

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಪಶ್ಚಿಮ ವಲಯ, ಮಂಗಳೂರು ಇವರ ಆದೇಶ ಸಂಖ್ಯೆ: ಸಿಬ್ಬಂದಿ 2/ಮೇಲ್ಮನವಿ/02/2006 ದಿ:20–04–2006

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:30–05–2008

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)34/2008–09 ದಿ:08–08–2008

5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 139 ಸಿಎನ್‌ಎಸ್ 08 ದಿನಾಂಕ:02.04.2009

**ಪ್ರಸ್ತಾವನೆ:**

ಶ್ರೀ ಜಯಕುಮಾರ್, ಸಿ.ಪಿ.ಸಿ.–2124, ಕಾಪು ಪೊಲೀಸ್ ಠಾಣೆ, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಈ ಹಿಂದೆ ಮಣಿಪಾಲ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆಯನ್ನು ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:–**

"ದಿ:05–05–2004 ರಂದು ಸಂಜೆ ಭಜರಂಗದಳ ಹಿರಿಯಡ್ಕ ಘಟಕದ ಸಹ–ಸಂಚಾಲಕ ಬೊಮ್ಮರಬೆಟ್ಟು ಸುಧಾಕರ್ ಪೂಜಾರಿಯನ್ನು ವೈಯುಕ್ತಿಕ ದ್ವೇಷದಿಂದ ಗುಡ್ಡೆಯಂಗಡಿ ನೀರಿನ ತೊಟ್ಟಿಯ ಬಳಿ ಗುಡ್ಡೆಅಂಗಡಿ ಸಂತು @ ಸಂತೋಷ ಪೂಜಾರಿ ಎಂಬಾತನು ಚೂರಿಯಿಂದ ತಿವಿದು ಕೊಲೆಮಾಡಿದ್ದು, ಈ ಬಗ್ಗೆ ಹಿರಿಯಡ್ಕ ಪೊಲೀಸ್ ಠಾಣೆಯಲ್ಲಿ ಅ.ಕ್ರ:43/2004 ಕಲಂ 302 ಐ.ಪಿ.ಸಿ. ಪ್ರಕರಣವು ದಾಖಲಾಗಿರುತ್ತದೆ. ಶ್ರೀ.ಜಯಕುಮಾರ್, ಸಿ.ಪಿ.ಸಿ.–2124, ಮಣಿಪಾಲ ಪೊಲೀಸ್ ಠಾಣೆ ಆದ ನೀವು ಈ ಘಟನೆಯ ಪ್ರತ್ಯಕ್ಷದರ್ಶಿಯಾಗಿದ್ದು, ನಿಮ್ಮ ಎದುರೇ ಈ ಕೊಲೆ ಕೃತ್ಯ ನಡೆದಿದ್ದು, ಅದನ್ನು ತಪ್ಪಿಸಬಹುದಾಗಿತ್ತು. ಅಲ್ಲದೇ ಘಟನಾಸ್ಥಳಕ್ಕೆ ಆರೋಪಿ ಸಂತು @ ಸಂತೋಷ ಪೂಜಾರಿ ಎಂಬಾತನು ನಿಮ್ಮ ಬಾಬ್ತು ಮೋಟಾರು ಸೈಕಲಿನಲ್ಲಿ ಬಂದ ಬಗ್ಗೆ ತಿಳಿದು ಬಂದಿದ್ದಲ್ಲದೆ ಈ ಘಟನೆ ಆದ ನಂತರವೂ ನೀವು ತಕ್ಷೀರು ಸ್ಥಳದಲ್ಲಿದ್ದು ಗಾಯಗೊಂಡು ಬಿದ್ದಿರುವ ಸುಧಾಕರ ಪೂಜಾರಿಯನ್ನು ಚಿಕಿತ್ಸೆಯ ಬಗ್ಗೆ ಆಸ್ಪತ್ರೆಗೆ ಸಾಗಿಸಲು ವಿಫಲರಾಗಿರುತ್ತೀರಿ. ನೀವು ಒಬ್ಬ ಶಿಸ್ತಿನ ಇಲಾಖೆಯಲ್ಲಿ ಇದ್ದುದಲ್ಲದೆ ಸಾಮಾನ್ಯ ನಾಗರೀಕನಾಗಿಯೂ ಈ ಘಟನೆಯನ್ನು ಹಿರಿಯಡ್ಕ ಪೊಲೀಸ್ ಠಾಣೆಗೆ ತಿಳಿಸಲು ವಿಫಲರಾಗಿ ಕರ್ತವ್ಯ ನಿರ್ಲಕ್ಷತೆಯನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿರುವುದಿಲ್ಲವೆಂದು ಸಲ್ಲಿಸಿದ ವರದಿಯನ್ನು ಶಿಸ್ತುಪ್ರಾಧಿಕಾರವು ಒಪ್ಪದೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಉಡುಪಿ, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿ:19–12–2005 ರ ಆದೇಶದಲ್ಲಿ "ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರ ಗಳಿಸುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಎರಡು ವರ್ಷಗಳ ಕಾಲ ತಡೆಹಿಡಿದು, ದಿ:27–05–2004 ರಿಂದ 27–11–2004ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ ಆದೇಶಿಸಿದ್ದಾರೆ."

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ, ಮಂಗಳೂರು, ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:20–04–2006ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಆರೋಪವು ನಿಸ್ಸಂಶಯವಾಗಿ ಸಾಬೀತಾದಂತಾಗಿರದ ಹಿನ್ನೆಲೆಯಲ್ಲಿ ಅರ್ಜಿದಾರರಿಗೆ ವಿಧಿಸಿದ ದಂಡನೆಯ ಪ್ರಮಾಣ ಅಧಿಕವಾಗಿದೆ ಎಂದು ಪರಿಗಣಿಸಿ ಈ ಕುರಿತು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಓದಲಾದ (5)ರ ಪತ್ರದಲ್ಲಿ ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 272 ಪೊಸಿಅ 2008 ಬೆಂಗಳೂರು, ದಿನಾಂಕ: 20ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಜಯಕುಮಾರ್, ಸಿ.ಪಿ.ಸಿ.–2124, ಕಾಪು ಪೊಲೀಸ್ ಠಾಣೆ, ಇವರಿಗೆ ಶಿಸ್ತುಪ್ರಾಧಿಕಾರದ ದಿ:19–12–2005ರ ದಂಡನಾದೇಶವನ್ನು ಭಾಗಶ: ಮಾರ್ಪಡಿಸಿ, ಇವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ರಹಿತವಾಗಿ ಎರಡು ವರ್ಷಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1257

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀಮತಿ.ರಾಧಾಬಾಯಿ ಕೋಂ ದಿ:ಆರ್.ಮಂಜಪ್ಪ, ಮಾಜಿ ಎಚ್.ಸಿ.–86, ಕೆ.ಎಸ್.ಆರ್.ಪಿ., ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 9ನೇ ಪಡೆ, ಕೆ.ಎಸ್.ಅರ್.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ:ಸಿಬ್ಬಂದಿ (1)ಇವಿ:53:97–98 ದಿನಾಂಕ:18–08–1999

2) ಅರ್ಜಿದಾರರ ಪರವಾಗಿ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:11-09-2006
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)101/2006-07 ದಿ:06-01-2007
4) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 212 ಸಿಎನ್‌ಎಸ್ 08 ದಿನಾಂಕ:20.03.2009.

**ಪ್ರಸ್ತಾವನೆ:**

ಶ್ರೀ ಆರ್.ಮಂಜಪ್ಪ, ಮಾಜಿ ಎಚ್.ಸಿ.-86, ಕೆ.ಎಸ್.ಆರ್.ಪಿ., ಬೆಂಗಳೂರು, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಅನಧಿಕೃತವಾಗಿ ಸರ್ಕಾರಿ ಸೇವೆಗೆ ಗೈರುಹಾಜರಾಗುತ್ತಿದ್ದ ಹಿನ್ನೆಲೆಯಲ್ಲಿ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:**

"ಹವಾ ಸಂಖ್ಯೆ:86, ಆರ್.ಮಂಜಪ್ಪ, 'ಎಫ್' ದಳ 9ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು, ಆದ ನೀವು ದಿ:19.07.97 ರಿಂದ 04.11.98ರ ವರೆಗೆ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರುಹಾಜರಾಗಿರುವಿರಿ. ಇದೇ ರೀತಿ ದಿ: 08.08.95 ರಿಂದ 14-08-95, 30-04-96 ರಿಂದ 09-05-96, 24-05-96 ರಿಂದ 02-09-96, 01-12-96 ರಿಂದ 27-01-97, 09-07-97 ರಿಂದ 15-07-97ರ ವರೆಗೆ ನೀವು ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯದಲ್ಲಿ ಮೇಲಿಂದ ಮೇಲೆ ಅನಧಿಕೃತವಾಗಿ ಗೈರುಹಾಜರಿಯಾಗುವ ರೂಡಿಯನ್ನು ಇಟ್ಟುಕೊಂಡ ಆಪಾದನೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿಯನ್ನು ನೀಡುವಂತೆ 2 ಬಾರಿ ಕೋರಲಾಗಿದ್ದು, ಅರ್ಜಿದಾರರು ಸಮಜಾಯಿಷಿಯನ್ನು ನೀಡದ ಕಾರಣ, ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 9ನೇ ಪಡೆ, ಕೆ.ಎಸ್.ಅರ್.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 18-08-1999ರ ಆದೇಶದಲ್ಲಿ "ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸುವ ದಂಡನೆ ವಿಧಿಸಿರುತ್ತಾರೆ."

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿರುವುದಿಲ್ಲ. ಈ ಮಧ್ಯ ಆ.ಪೊ.ಅ. ರವರು ನಿಧನ ಹೊಂದಿರುವುದರಿಂದ ಅವರ ಪತ್ನಿಯಾದ ಶ್ರೀಮತಿ.ರಾಧಾಬಾಯಿ, ಇವರು ತಮ್ಮ ಪತಿಯ ಪರವಾಗಿ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿದ್ದಾರೆ.

ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ದಿವಂಗತರು ಸರ್ಕಾರದಲ್ಲಿ ಸಲ್ಲಿಸಿದ ಸೇವಾವಧಿಯನ್ನು ಗಮನ ದಲ್ಲಿರಿಸಿಕೊಂಡು ಶಿಸ್ತುಪ್ರಾಧಿಕಾರದ ದಂಡನಾದೇಶವನ್ನು ಭಾಗಶ: ಮಾರ್ಪಡಿಸಲು ಸರ್ಕಾರವು ತೀರ್ಮಾನಿಸಿ ಈ ಕುರಿತು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಓದಲಾದ (4)ರ ಪತ್ರದಲ್ಲಿ ಪಡೆದು, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 350 ಪೊಸಿಅ 2007 ಬೆಂಗಳೂರು, ದಿನಾಂಕ: 20ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ದಿ:ಆರ್.ಮಂಜಪ್ಪ, ಹವಲ್ದಾರ್, ಕೆ.ಎಸ್.ಆರ್.ಪಿ. ಇವರಿಗೆ ಶಿಸ್ತುಪ್ರಾಧಿಕಾರ ವಿಧಿಸಿದ ದಂಡನಾದೇಶವನ್ನು ಭಾಗಶ: ಮಾರ್ಪಡಿಸಿ ಸದರಿ ದಿನಾಂಕ:18-08-1999 ರಿಂದಲೇ ಜಾರಿಗೆ ಬರುವಂತೆ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 285(4)ರ ಪ್ರಕಾರ ಕಡ್ಡಾಯ ನಿವೃತ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1258

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಗಂಗರಂಗಯ್ಯ, ಸಿ.ಎಚ್.ಸಿ.-54, ತಿಲಕ ಪಾರ್ಕ್ ಪೊಲೀಸ್ ಠಾಣೆ, ತುಮಕೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು, ಇವರ ಆದೇಶ ಸಂಖ್ಯೆ: ಪನ್ಸಿ/55/2007-08 ಓ.ಬಿ:72/08 ದಿ:23-01-2008
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ:ಅಪೀಲು 59/2007-08 ಓ.ಬಿ.ಸಂ:9/2008-09 ದಿನಾಂಕ:16-04-08
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:09-07-2008

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)44/2008–09 ದಿ:18–02–2009

**ಪ್ರಸ್ತಾವನೆ:–**

ಶ್ರೀ ಗಂಗರಂಗಯ್ಯ, ಸಿ.ಎಚ್.ಸಿ.–54, ಇವರು ತಿಲಕ ಪಾರ್ಕ್ ಪೊಲೀಸ್ ಠಾಣೆ, ತುಮಕೂರಲ್ಲಿ, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:–**

"ನೀವು ಮರಳೂರು ದಿಣ್ಣೆ ಉಪಠಾಣೆಯ ಉಸ್ತುವಾರಿ ಸಿಬ್ಬಂದಿಗಳಾಗಿದ್ದು, ದಿ:07–09–2007 ರಂದು ಮರಳೂರು ದಿಣ್ಣೆಯ ಎಸ್.ಎಸ್.ಐ.ಟಿ. ಕಾಲೇಜಿನ ಹೊರ ರಾಜ್ಯದ ವಿದ್ಯಾರ್ಥಿಗಳು ವೈಷಮ್ಯದಿಂದ ಜಗಳ ಮಾಡಿಕೊಂಡು, ರಕ್ತಗಾಯಗೊಂಡ ಹಿನ್ನೆಲೆ ಯಲ್ಲಿ ತುಮಕೂರು (ಗ್ರಾ) ಪೊಲೀಸ್ ಠಾಣೆಯಲ್ಲಿ ಮೊ.ನಂ:258/ 2007, 259/07 ಹಾಗೂ 261/2007ರ ಅಡಿಯಲ್ಲಿ ಮೊಕದ್ದಮೆ ಗಳು ದಾಖಲಾಗಿರುತ್ತವೆ. ಎಸ್.ಎಸ್.ಐ.ಟಿ. ಕಾಲೇಜು ಹೊರ ಆವರಣದಲ್ಲಿ ಏನು ನಡೆಯುತ್ತಿದೆ ಎಂಬುದರ ಬಗ್ಗೆ ಮಾಹಿತಿ ಸಂಗ್ರಹಿಸಿ ಮೇಲಾಧಿಕಾರಿಗಳಿಗೆ ತಿಳಿಸದೆ ವಿಫಲರಾಗಿರುತ್ತೀರಿ ಮತ್ತು ಗಸ್ತಿನ ಬಗ್ಗೆ ಯಾವುದೇ ತರಹದ ಆಸಕ್ತಿ ವಹಿಸದೇ ಕರ್ತವ್ಯದಲ್ಲಿ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ತೋರಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 23–01–2008ರ ಆದೇಶದಲ್ಲಿ "ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮೂರು ತಿಂಗಳು ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ."

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:16–04–2008ರ ಆದೇಶದಲ್ಲಿ ಮೇಲ್ಮನವಿ ಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 222 ಪೊಸಿಅ 2008 ಬೆಂಗಳೂರು, ದಿನಾಂಕ: 20ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಗಂಗರಂಗಯ್ಯ, ಸಿ.ಎಚ್.ಸಿ.–54, ತಿಲಕ ಪಾರ್ಕ್ ಪೊಲೀಸ್ ಠಾಣೆ, ತುಮಕೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1259

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಪಿ.ಸದಾನಂದ, ಎ.ಎಸ್.ಐ., ಸಂಚಾರ ಪಶ್ಚಿಮ ಪೊಲೀಸ್ ಠಾಣೆ, ಮಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ದಕ್ಷಿಣ ಕನ್ನಡ, ಮಂಗಳೂರು, ಇವರ ಆದೇಶ ಸಂಖ್ಯೆ:ಇವಿ/6/2005 ದಿನಾಂಕ:07–02–2007

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ, ಮಂಗಳೂರು, ಇವರ ಆದೇಶ ಸಂಖ್ಯೆ:ಸಿಬ್ಬಂದಿ–2/ಮೇಲ್ಮನವಿ/02/2007 ದಿ:02–07–2007

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:15–10–2007

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)88/2007–08 ದಿ:25–03–2008
5) ಕಾರಣ ಕೇಳುವ ನೋಟಿಸ್ ಸಂಖ್ಯೆ:ಒಇ 99 ಪೊಸಿಅ 2008 ದಿ:23–09–08
6) ಅರ್ಜಿದಾರರ ಸಮಜಾಯಿಷಿ ದಿನಾಂಕ:15–11–08
7) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 188 ಸಿಎನ್‌ಎಸ್ 08 ದಿನಾಂಕ: 01.04.2009

**ಪ್ರಸ್ತಾವನೆ:**

ಶ್ರೀ ಪಿ.ಸದಾನಂದ, ಎ.ಎಸ್.ಐ., ಸಂಚಾರ ಪಶ್ಚಿಮ ಪೊಲೀಸ್ ಠಾಣೆ, ಮಂಗಳೂರು, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಉಪ್ಪಿನಂಗಡಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ತೀವ್ರ ಅಶಿಸ್ತು ಹಾಗೂ ದುರ್ನಡತೆಯನ್ನು ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:**

1. "ಆ.ಪೊ.ಅ. (1)ನೇ ಶ್ರೀ ಪಿ.ಸದಾನಂದ, ಎ.ಎಸ್.ಐ., ಆದ ನೀವು ಉಪ್ಪಿನಂಗಡಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯದಲ್ಲಿರುತ್ತೀರಿ. ದಿ:13–09–2005 ರಂದು ಸಂಜೆ ಉಪ್ಪಿನಂಗಡಿ ಠಾಣೆಯಲ್ಲಿ ವರದಿಯಾದ ಮೊ.ನಂ.283/2005 ಕಲಂ 279–337 ಐಪಿಸಿ ಪ್ರಕರಣದಲ್ಲಿ ಸ್ವಾಧೀನ ಪಡಿಸಲಾದ ವಾಹನಗಳನ್ನು ಬಿಡುಗಡೆ ಮಾಡುವಂತೆ ದಿ:14–09–05 ರಂದು ಮಾನ್ಯ ನ್ಯಾಯಾಲಯವು ಆದೇಶಿಸಿರುತ್ತದೆ. ಸದರಿ ಆದೇಶವನ್ನು ಹಾಜರುಪಡಿಸಿದ್ದರೂ ಉಪ್ಪಿನಂಗಡಿ ಠಾಣಾ ಪ್ರಭಾರದಲ್ಲಿದ್ದ ಹಾಗೂ ಪ್ರಕರಣದ ತನಿಖಾಧಿಕಾರಿಯಾದ ನೀವು ನ್ಯಾಯಾಲಯದ ಆದೇಶದಂತೆ ವಾಹನ ನಂ.ಕೆಎ–19ಬಿ–3147ನೇದನ್ನು ಅದರ ಮಾಲಿಕರಿಗೆ ಬಿಟ್ಟುಕೊಡದೆ ಹಣದ ಬೇಡಿಕೆ ಒಡ್ಡಿ ವಾಹನವನ್ನು ಬಿಡುಗಡೆ ಮಾಡಿದಂತೆ ದಾಖಲಾತಿಗಳನ್ನು ತಯಾರಿಸಿ ಹಾಗೂ ಚಾಲಕನ ಮೂಲ ಚಾಲನಾ ಪರವಾನಿಗೆಯನ್ನು ಅನಗತ್ಯವಾಗಿ ಇಟ್ಟುಕೊಂಡು ವಾಹನದ ಮಾಲಿಕರಿಂದ ಅಕ್ರಮ ಸಂಭಾವನೆ ಪಡೆಯುವ ಉದ್ದೇಶದಿಂದ ವಾಹನವನ್ನು ಇಟ್ಟುಕೊಂಡು ನ್ಯಾಯಾಲಯದ ಆದೇಶವನ್ನು ನಿರ್ಲಕ್ಷಿಸಿ ತೀವ್ರ ಅಶಿಸ್ತು ಹಾಗೂ ದುರ್ನಡತೆ ಪ್ರದರ್ಶಿಸಿರುತ್ತೀರಿ.
2. ಅಲ್ಲದೆ ಉಪ್ಪಿನಂಗಡಿ ಠಾಣಾ ಮೊ.ನಂ.283/05 ಪ್ರಕರಣದಲ್ಲಿ ತನಿಖಾಧಿಕಾರಿಯಾಗಿರುವ ನೀವು ಈ ಪ್ರಕರಣದಲ್ಲಿ ಸೊತ್ತು ಸ್ವಾಧೀನಪಡಿಸಿದ ಬಗ್ಗೆ ದಾಖಲಿಸಿದ ರಿಜಿಸ್ಟರ್, ಕೈದಿಶೋಧನೆ ರಿಜಿಸ್ಟರ್ ಮತ್ತು ಬಂಧಪತ್ರ ಮತ್ತು ಜಾಮೀನು ಬಂಧಪತ್ರ ಈ ದಾಖಲೆಗಳಿಗೆ ಸಹಿ ಮಾಡದೆ ತೀವ್ರ ಕರ್ತವ್ಯ ಲೋಪವೆಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ (2) ಮಾತ್ರ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ದಕ್ಷಿಣ ಕನ್ನಡ, ಮಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 07–02–2007ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರ ಗಳಿಸುವ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿ ದಿ:24–09–2005 ರಿಂದ 17–12–2005ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ ಆದೇಶಿಸಿದ್ದಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ, ಮಂಗಳೂರು, ಇವರು ಮಾನವೀಯ ದೃಷ್ಠಿಯಿಂದ ಶಿಸ್ತುಪ್ರಾಧಿಕಾರದ ಆದೇಶವನ್ನು ಭಾಗಶ: ಮಾರ್ಪಡಿಸಿ, ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಮೂರು ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 02–07–2007ರಲ್ಲಿ ಆದೇಶಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಮೇಲ್ಮನವಿ ಪ್ರಾಧಿಕಾರವು ದಂಡನೆಯನ್ನು ಕಡಿತಗೊಳಿಸಿರುವುದು ಆರೋಪದ ಸ್ವರೂಪಕ್ಕೆ ಅನುಗುಣವಾಗಿರುವುದಿಲ್ಲವೆಂದು ಸರ್ಕಾರವು ತೀರ್ಮಾನಿಸಿ ಅರ್ಜಿದಾರರಿಗೆ ಓದಲಾದ (5)ರಲ್ಲಿ ಕಾರಣ ಕೇಳುವ

ನೋಟೀಸನ್ನು ಜಾರಿಗೊಳಿಸಿ ಸಮಜಾಯಿಷಿಯನ್ನು ನೀಡುವಂತೆ ಸೂಚಿಸಲಾಗಿತ್ತು. ಅರ್ಜಿದಾರರು ಓದಲಾದ (6)ರ ಪತ್ರದಲ್ಲಿ ನೀಡಲಾದ ಸಮಜಾಯಿಷಿಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಬಗ್ಗೆ ಓದಲಾದ (7)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 99 ಪೊಸಿಅ 2008, ಬೆಂಗಳೂರು, ದಿನಾಂಕ: 20ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪಿ.ಸದಾನಂದ, ಎ.ಎಸ್.ಐ., ಸಂಚಾರ ಪಶ್ಚಿಮ ಪೊಲೀಸ್ ಠಾಣೆ, ಮಂಗಳೂರು, ಇವರಿಗೆ ಮೇಲ್ಮನವಿ ಪ್ರಾಧಿಕಾರವು ದಿ:02-07-07ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಮಾರ್ಪಡಿಸಿ, ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ದಕ್ಕೆಯಾಗದಂತೆ ಮುಂದೂಡಿ ಆದೇಶಿಸಿದೆ ಮತ್ತು ಅಮಾನತ್ತಿನಲ್ಲಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1260 **ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಂ.ಎಂ.ನದಾಫ್, ಪಿ.ಎಸ್.ಐ., ಎಕ್ಸೈಜ್ ಸ್ಕ್ವಾಡ್, ಜಿಲ್ಲಾ ಪೊಲೀಸ್ ಕಛೇರಿ, ಹಾವೇರಿ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಹಾವೇರಿ, ಇವರ ಆದೇಶ ಸಂಖ್ಯೆ: ಪಿಆರ್/143/2007 ಓ.ಬಿ:587/07 ದಿ:31-10-2007
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ:ಅಪೀಲು 8/ಉವ/2008 ದಿನಾಂಕ:22-04-08
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:08-08-2008
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು (2)56/2008-09 ದಿ:25-10-2008.

**ಪ್ರಸ್ತಾವನೆ:**

ಶ್ರೀ ಎಂ.ಎಂ.ನದಾಫ್, ಪಿ.ಎಸ್.ಐ., ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಹಾವೇರಿ ಜಿಲ್ಲೆಯ ಗುತ್ತಲ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಬೇಜವಾಬ್ದಾರಿತನ ಹಾಗೂ ತೀವ್ರ ನಿರ್ಲಕ್ಷತನ ತೋರಿಸಿದ ಕಾರಣಕ್ಕಾಗಿ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:**

"ಶಿಸ್ತುಪಾಲನಾ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ನೀವು ನಿಮ್ಮ ಠಾಣಾ ವ್ಯಾಪ್ತಿ ಕಾನೂನು ಬಾಹಿರ ಚಟುವಟಿಕೆಗಳಾದ ಓ.ಸಿ., ಮಟಕಾ ಜೂಜಾಟದಂತಹ ಕೃತ್ಯಗಳು ಜರುಗುತ್ತಿದ್ದು ಹಾಗೂ ಅವುಗಳ ಬಗ್ಗೆ ಮಾಹಿತಿ ಇದ್ದರೂ ಸಹ ಯಾವುದೇ ಕ್ರಮ ಜರುಗಿಸದೇ ಆದ್ಯ ಕರ್ತವ್ಯ ನಿರ್ಲಕ್ಷತನ ತೋರಿರುತ್ತೀರಿ. ದಿ:26-09-07 ರಂದು ಬಾತ್ಮಿಯ ಆಧಾರದ ಮೇಲೆ ಹೆಚ್ಚುವರಿ ಎಸ್.ಪಿ. ಹಾಗೂ ಡಿ.ಎಸ್.ಪಿ. ಹಾವೇರಿ, ರವರ ಗುತ್ತಲಕ್ಕೆ ಬಂದು ರೇಡ್ ಮಾಡಿ, ಗುತ್ತಲ ಪಿ.ಎಸ್. ಅಪರಾಧ ಸಂಖ್ಯೆ:136/07 ಕಲಂ 78(G) ಕೆ.ಪಿ.ಕಾಯ್ದೆಯನ್ವಯ ಪ್ರಕರಣ ದಾಖಲಿಸಲಾಗಿದೆ. ಮೇಲಾಧಿಕಾರಿಗಳು ಈ ಬಗ್ಗೆ ಸಾಕಷ್ಟು ಬಾರಿ ತಿಳುವಳಿಕೆ ನೀಡಿದರೂ ಸಹ ಕಾನೂನು ಬಾಹಿರ ಚಟುವಟಿಕೆಗಳಾದ ಓ.ಸಿ.ಮಟಕಾ ಜೂಜಾಟದಂತಹ ಕೃತ್ಯಗಳನ್ನು ನಿಯಂತ್ರಿಸುವಲ್ಲಿ ವಿಫಲರಾಗಿ ನೀವು ನಿಮ್ಮ ಆದ್ಯ ಕರ್ತವ್ಯದಲ್ಲಿ ತೀವ್ರ ಬೇಜವಾಬ್ದಾರಿತನ ಹಾಗೂ ಕರ್ತವ್ಯ ನಿರ್ಲಕ್ಷತನ ತೋರಿರುವುದು ಉಲ್ಲೇಖಿತ ವರದಿಯಿಂದ ದೃಢಪಟ್ಟಿರುತ್ತದೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಹಾವೇರಿ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ:31-10-2007ರ ಆದೇಶದಲ್ಲಿ "ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರದಂತೆ ಒಂದು ವರ್ಷ ಕಾಲ ತಡೆಹಿಡಿಯುವ ದಂಡನೆಯನ್ನು ವಿಧಿಸಿದ್ದಾರೆ."

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 22.04.08ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 244 ಪೊಸಿಅ 2008 ಬೆಂಗಳೂರು, ದಿನಾಂಕ: 20ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಎಂ.ನದಾಫ್, ಪಿ.ಎಸ್.ಐ., ಎಕ್ಸೈಜ್ ಸ್ಕ್ವಾಡ್, ಜಿಲ್ಲಾ ಪೊಲೀಸ್ ಕಛೇರಿ, ಹಾವೇರಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1261 **ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ–ಕರ್ನಾಟಕ ಇದರಡಿ, 2008–09ನೇ ಸಾಲಿನಲ್ಲಿ ಬಾಕಿ ನೀಡಬೇಕಾದ ರಾಜ್ಯದ ಪಾಲಿನ ಅನುದಾನವನ್ನು ಕೊಪ್ಪಳ ಜಿಲ್ಲೆಗೆ 2009–10ನೇ ಸಾಲಿನಲ್ಲಿ ಬಿಡುಗಡೆ ಮಾಡುತ್ತಿರುವ ಬಗ್ಗೆ.

**ಉಲ್ಲೇಖ:** ಕೇಂದ್ರ ಸರ್ಕಾರದ ಪತ್ರದ ಸಂ.ಜೆ–12022/23/2008–ಎನ್.ಆರ್.ಇ.ಜಿ.ಎ–ಎಸ್.ಎಲ್ ನಂ.977 ದಿ:30.03.2009.

**ಪ್ರಸ್ತಾವನೆ:**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನಕ್ಕಾಗಿ ಉಲ್ಲೇಖಿತ ಪತ್ರದಲ್ಲಿ 2008–09ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಕೊಪ್ಪಳ ಜಿಲ್ಲೆಗೆ ರೂ. 200.00 ಲಕ್ಷಗಳನ್ನು ನೇರವಾಗಿ ಬಿಡುಗಡೆ ಮಾಡಿ, ಅದಕ್ಕೆ ಪೂರಕವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನವನ್ನು ಹದಿನೈದು ದಿನಗಳೊಳಗಾಗಿ ಬಿಡುಗಡೆ ಮಾಡುವಂತೆ ಆದೇಶಿಸಿರುತ್ತದೆ. 2008–09ನೇ ಸಾಲಿನಲ್ಲಿ ರಾಜ್ಯದಿಂದ ಬಿಡುಗಡೆಗೊಳಿಸಬೇಕಾದ ಅನುದಾನವು ಅನುದಾನದ ಕೊರತೆಯಿಂದಾಗಿ ಬಿಡುಗಡೆಗೊಳಿಸಲಾಗಲಿಲ್ಲ. ಸದರಿ ರಾಜ್ಯದ ಪಾಲಿನ ಅನುದಾನವನ್ನು 2009–10ನೇ ಸಾಲಿನಲ್ಲಿ ಬಿಡುಗಡೆಗೊಳಿಸಬೇಕಾಗಿದ್ದು, ಸದರಿ ಯೋಜನೆಗೆ ಆಯವ್ಯಯದಲ್ಲಿ ಅನುದಾನವನ್ನು ರಾಜ್ಯದ ಪಾಲಾಗಿ, ಸಾಮಗ್ರಿಗಳ ಬಳಕೆಗಾಗಿ ಶೇಕಡ 11.1 ರಷ್ಟಾಗಿ ಬಿಡುಗಡೆ ಮಾಡಲು ಒದಗಿಸಲಾಗಿರುತ್ತದೆ. ಆದುದರಿಂದ, ಪ್ರಸ್ತುತ ಸಾಲಿನಲ್ಲಿ ಕೊಪ್ಪಳ ಜಿಲ್ಲೆಗೆ, ಉದ್ಯೋಗ ಖಾತರಿ ಯೋಜನೆಯಡಿ, ಸಾಮಗ್ರಿಗಳ ಘಟಕದ ಬಳಕೆಗಾಗಿ, ಶೇಕಡಾ 11.1 ರಷ್ಟಾದ ರೂ. 22.20 ಲಕ್ಷಗಳನ್ನು ಅನುಬಂಧದಲ್ಲಿ ನಮೂದಿಸಿದಂತೆ, ಬಿಡುಗಡೆ ಮಾಡಲು ನಿರ್ಧರಿಸಿದೆ. ಆದುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂ.ಗ್ರಾಅಪ.50.ಉಖಾಯೋ.09–10(3) ಬೆಂಗಳೂರು, ದಿನಾಂಕ: 25ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ– ಕರ್ನಾಟಕ ಇದರಡಿ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ, 2008–09ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಅನುದಾನಕ್ಕೆ ಅನುಗುಣವಾಗಿ ರಾಜ್ಯದ ಪಾಲನ್ನು ಮೊದಲನೇ ಕಂತಿನ ಅನುದಾನವಾದ ರೂ. 22.20 ಲಕ್ಷಗಳನ್ನು (ರೂ. ಇಪ್ಪತ್ತೆರೆಡು ಲಕ್ಷದ ಇಪ್ಪತ್ತು ಸಾವಿರ ಮಾತ್ರ) ಅನುಬಂಧದಲ್ಲಿ ನಮೂದಿಸಿದಂತೆ, ಸಾಮಗ್ರಿ ಘಟಕದ ವೆಚ್ಚಕ್ಕೆ ಬಳಸಲು ಕೊಪ್ಪಳ ಜಿಲ್ಲೆಗೆ ಬಿಡುಗಡೆ ಮಾಡಿದೆ.

ಆರ್ಥಿಕ ಇಲಾಖೆಯ ಆದೇಶದ ಸಂ:ಎಫ್‌ಡಿ.7ಜೆಡ್ಪಿಎ. 2003 ದಿನಾಂಕ:14–7–2005 ಮತ್ತು ಸರ್ಕಾರದ ಸುತ್ತೋಲೆ ಸಂ.ಆಇ 01 ಜಿಪಹ 07 ದಿನಾಂಕ:19–01–2007ರಲ್ಲಿನ ಸೂಚನೆಗಳನ್ವಯ ಈ ಕೆಳಕಂಡ ಲೆಕ್ಕಶೀರ್ಷಿಕೆಯಡಿ ಪೇಯಿಸ್ ರಸೀದಿಯ ಮೇಲೆ ಖಜಾನೆಯಿಂದ ಅನುದಾನ ಪಡೆದು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿ ವೆಚ್ಚವನ್ನು ಭರಿಸತಕ್ಕದ್ದು. 2008–09ನೇ ಸಾಲಿನ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಲೆಕ್ಕಶಿರ್ಷಿಕೆ "2505 ಗ್ರಾಮೀಣ ಉದ್ಯೋಗ 02 ಗ್ರಾಮೀಣ ಉದ್ಯೋಗ ಖಾತರಿ ಯೋಜನೆ 101 –ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾರ್ಯಕ್ರಮ 0–01 ಕರ್ನಾಟಕ ಗ್ರಾಮೀಣ ಉದ್ಯೋಗ ಭರವಸೆ ಯೋಜನೆ –059 ಇತರೆ ಖರ್ಚು (ಯೋಜನೆ)" (2505–02–101–0–01–059).

ಈಗ ಬಿಡುಗಡೆ ಮಾಡುವ ಅನುದಾನವನ್ನು ಸಾಮಗ್ರಿ ಘಟಕಕ್ಕೆ ಮಾತ್ರ ಬಳಸಿಕೊಳ್ಳತಕ್ಕದ್ದು. ಪಂಚಾಯತ್ ರಾಜ್ ಸಂಸ್ಥೆಗೆ ಸಂಬಂಧಪಟ್ಟ ಅಧಿಕಾರಿಗಳು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಗೆ ಸಂಬಂಧಿಸಿದಂತೆ ಅಧಿನಿಯಮದ ಪ್ರಕರಣಗಳು, ಕೇಂದ್ರ ಸರ್ಕಾರದ ನಿರ್ವಹಣೆಯ ಮಾರ್ಗಸೂಚಿಗಳು, ಸುತ್ತೋಲೆಗಳು, ಆದೇಶಗಳು ಹಾಗೂ ರಾಜ್ಯ ಸರ್ಕಾರವು ದಿನಾಂಕ:1–2–2007ರಂದು ಅಧಿಸೂಚಿಸಿರುವ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ–ಕರ್ನಾಟಕ ಇದರ ಮಾರ್ಗಸೂಚಿಗಳ ರೀತ್ಯಾ ಕ್ರಮ ತೆಗೆದುಕೊಳ್ಳತಕ್ಕದ್ದು. ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಮತ್ತು ಸಂಬಂಧಿಸಿದ ತಾಲ್ಲೂಕು ಪಂಚಾಯಿತಿಗಳ ಕಾರ್ಯನಿರ್ವಾಹಕ ಅಧಿಕಾರಿಗಳು, ಉಸ್ತುವಾರಿ, ಅನುಷ್ಠಾನ ಮತ್ತು ಜಾಗೃತಿ ಇವುಗಳನ್ನು ಚಲಾಯಿಸುವ ಸಂಪೂರ್ಣ ಜವಾಬ್ದಾರಿ ಅವರುಗಳದಾಗಿರುತ್ತದೆ.

ಸರ್ಕಾರದ ಆದೇಶವನ್ನು ಈ ಇಲಾಖೆಯ ಮುಖ್ಯಸ್ಥರು (ಹಣಕಾಸು ಮತ್ತು ಲೆಕ್ಕಪತ್ರ) ರವರು ಸಹಮತಿಸಿದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ:ಪಿ.ಸಿ.ಜಾಫರ್**

ನಿರ್ದೇಶಕರು

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಹಾಗೂ ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ANNEXURE TO G.O.NO:RDP;50:NRE:2008, Bangalore, Dated:25-04-2009.**

Statement showing the releases of IIIrd installment of state share of funds, due for the 2008-09, released during the year 2009-10 under NREGA.

(Rs.in lakhs)

| Sl. No. | District | Central share directly to ZP | | State share proposed for releases as per Column No.4 | Funds being released in this Order |
|---|---|---|---|---|---|
| | | Date | Amount | | |
| 1 | 2 | 3 | 4 | 5 | 8 |
| 1 | Koppal | 30-03-2009 | 200.00 | 22.20 | 22.20 |

**Dr.P.C.JAFFER**

Director,

P.R. 1262

National Rural Employment Guarantee Scheme & E/o.

Dy. Secretary to Government, Rural Development & Panchayat Raj Department.

**ವಿಷಯ:** ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ –ಕರ್ನಾಟಕ ಇದರಡಿ, 2008–09ನೇ ಸಾಲಿನಲ್ಲಿ ಬಾಕಿ ನೀಡಬೇಕಾದ ರಾಜ್ಯದ ಪಾಲಿನ ಅನುದಾನವನ್ನು ಕೋಲಾರ ಜಿಲ್ಲೆಗೆ 2009–10ನೇ ಸಾಲಿನಲ್ಲಿ ಬಿಡುಗಡೆ ಮಾಡುತ್ತಿರುವ ಬಗ್ಗೆ.

**ಉಲ್ಲೇಖ:** ಕೇಂದ್ರ ಸರ್ಕಾರದ ಪತ್ರದ ಸಂ.ಜಿ–20011/1/2008–ಎನ್.ಆರ್.ಇ.ಜಿ.ಎ–ಎಸ್.ಎಲ್‌ನಂ.1001 ದಿ:31.03.2009.

**ಪ್ರಸ್ತಾವನೆ:**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನಕ್ಕಾಗಿ ಉಲ್ಲೇಖಿತ ಪತ್ರದಲ್ಲಿ 2008–09ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಕೋಲಾರ ಜಿಲ್ಲೆಗೆ ರೂ. 49.20 ಲಕ್ಷಗಳನ್ನು ನೇರವಾಗಿ ಬಿಡುಗಡೆ ಮಾಡಿ, ಅದಕ್ಕೆ ಪೂರಕವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನವನ್ನು ಹದಿನೈದು ದಿನಗಳೊಳಗಾಗಿ ಬಿಡುಗಡೆ ಮಾಡುವಂತೆ ಆದೇಶಿಸಿರುತ್ತದೆ. 2008–09ನೇ ಸಾಲಿನಲ್ಲಿ ರಾಜ್ಯದಿಂದ ಬಿಡುಗಡೆಗೊಳಿಸಬೇಕಾದ ಅನುದಾನವು, ಅನುದಾನದ ಕೊರತೆಯಿಂದಾಗಿ ಬಿಡುಗಡೆಗೊಳಿಸಲಾಗಲಿಲ್ಲ. ಸದರಿ ರಾಜ್ಯದ ಪಾಲಿನ ಅನುದಾನವನ್ನು 2009–10ನೇ ಸಾಲಿನಲ್ಲಿ ಬಿಡುಗಡೆಗೊಳಿಸಬೇಕಾಗಿದ್ದು ಸದರಿ ಯೋಜನೆಗೆ ಆಯವ್ಯಯದಲ್ಲಿ ಅನುದಾನವನ್ನು ರಾಜ್ಯದ ಪಾಲಾಗಿ, ಸಾಮಗ್ರಿಗಳ ಬಳಕೆಗಾಗಿ ಶೇಕಡ 11.1 ರಷ್ಟಾಗಿ ಬಿಡುಗಡೆ ಮಾಡಲು ಒದಗಿಸಲಾಗಿರುತ್ತದೆ. ಆದುದರಿಂದ, ಪ್ರಸ್ತುತ ಸಾಲಿನಲ್ಲಿ ಕೋಲಾರ ಜಿಲ್ಲೆಗೆ, ಉದ್ಯೋಗ ಖಾತರಿ ಯೋಜನೆಯಡಿ, ಸಾಮಗ್ರಿಗಳ ಘಟಕದ ಬಳಕೆಗಾಗಿ, ಶೇಕಡಾ 11.1 ರಷ್ಟಾದ ರೂ. 5.46 ಲಕ್ಷಗಳನ್ನು ಅನುಬಂಧದಲ್ಲಿ ನಮೂದಿಸಿದಂತೆ, ಬಿಡುಗಡೆ ಮಾಡಲು ನಿರ್ಧರಿಸಿದೆ. ಆದುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂ.ಗ್ರಾಅಪ.63.ಉಖಾಯೋ.09 ಬೆಂಗಳೂರು, ದಿನಾಂಕ: 25ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ– ಕರ್ನಾಟಕ ಇದರಡಿ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ, 2008–09ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಅನುದಾನಕ್ಕೆ ಅನುಗುಣವಾಗಿ ರಾಜ್ಯದ ಪಾಲಿನ ಅನುದಾನವಾದ ರೂ. 5.46 ಲಕ್ಷಗಳನ್ನು (ರೂ. ಐದು ಲಕ್ಷದ ನಲವತ್ತಾರು ಸಾವಿರ ಮಾತ್ರ) ಅನುಬಂಧದಲ್ಲಿ ನಮೂದಿಸಿದಂತೆ, ಸಾಮಗ್ರಿ ಘಟಕದ ವೆಚ್ಚಕ್ಕೆ ಬಳಸಲು ಕೋಲಾರ ಜಿಲ್ಲೆಗೆ ಬಿಡುಗಡೆ ಮಾಡಿದೆ.

ಆರ್ಥಿಕ ಇಲಾಖೆಯ ಆದೇಶದ ಸಂ:ಎಫ್‌ಡಿ.7ಜೆಡ್ಡಿಎ. 2003 ದಿನಾಂಕ:14–7–2005 ಮತ್ತು ಸರ್ಕಾರದ ಸುತ್ತೋಲೆ ಸಂ.ಆಇ 01 ಜಿಪಅ 07 ದಿನಾಂಕ:19–01–2007ರಲ್ಲಿನ ಸೂಚನೆಗಳನ್ವಯ ಈ ಕೆಳಕಂಡ ಲೆಕ್ಕಶೀರ್ಷಿಕೆಯಡಿ ಪೇಯಿಸ್ ರಸೀದಿಯ ಮೇಲೆ ಖಜಾನೆಯಿಂದ ಅನುದಾನ ಪಡೆದು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿ ವೆಚ್ಚವನ್ನು ಭರಿಸತಕ್ಕದ್ದು. 2008–09ನೇ ಸಾಲಿನ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಲೆಕ್ಕಶೀರ್ಷಿಕೆ "2505 ಗ್ರಾಮೀಣ ಉದ್ಯೋಗ 02 ಗ್ರಾಮೀಣ ಉದ್ಯೋಗ ಖಾತರಿ ಯೋಜನೆ 101 –ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾರ್ಯಕ್ರಮ 0–01 ಕರ್ನಾಟಕ ಗ್ರಾಮೀಣ ಉದ್ಯೋಗ ಭರವಸೆ ಯೋಜನೆ –059 ಇತರೆ ಖರ್ಚು (ಯೋಜನೆ) (2505–02–101–0–01–059). ಬಿಡುಗಡೆ ಮಾಡುವ ಅನುದಾನವನ್ನು ಸಾಮಗ್ರಿ ಘಟಕಕ್ಕೆ ಮಾತ್ರ ಬಳಸಿಕೊಳ್ಳತಕ್ಕದ್ದು. ಪಂಚಾಯತ್ ರಾಜ್ ಸಂಸ್ಥೆಗೆ ಸಂಬಂಧಪಟ್ಟ ಅಧಿಕಾರಿಗಳು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಗೆ ಸಂಬಂಧಿಸಿದಂತೆ ಅಧಿನಿಯಮದ ಪ್ರಕರಣಗಳು, ಕೇಂದ್ರ ಸರ್ಕಾರದ ನಿರ್ವಹಣೆಯ ಮಾರ್ಗಸೂಚಿಗಳು, ಸುತ್ತೋಲೆಗಳು, ಆದೇಶಗಳು ಹಾಗೂ ರಾಜ್ಯ ಸರ್ಕಾರವು ದಿನಾಂಕ:1–2–2007ರಂದು ಅಧಿಸೂಚಿಸಿರುವ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ– ಕರ್ನಾಟಕ ಇದರ ಮಾರ್ಗಸೂಚಿಗಳ ರೀತ್ಯಾ ಕ್ರಮ ತೆಗೆದುಕೊಳ್ಳತಕ್ಕದ್ದು. ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಮತ್ತು ಸಂಬಂಧಿಸಿದ ತಾಲ್ಲೂಕು ಪಂಚಾಯಿತಿಗಳ ಕಾರ್ಯನಿರ್ವಾಹಕ ಅಧಿಕಾರಿಗಳು, ಉಸ್ತುವಾರಿ, ಅನುಷ್ಠಾನ ಮತ್ತು ಜಾಗೃತಿ ಚಲಾಯಿಸುವ ಸಂಪೂರ್ಣ ಜವಾಬ್ದಾರಿ ಅವರುಗಳದಾಗಿರುತ್ತದೆ.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಮುಖ್ಯಸ್ಥರು (ಹಣಕಾಸು ಮತ್ತು ಲೆಕ್ಕಪತ್ರ) ರವರು ಸಹಮತಿಸಿದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ:ಪಿ.ಸಿ.ಜಾಫರ್**

ನಿರ್ದೇಶಕರು

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಹಾಗೂ ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ANNEXURE TO G.O.NO:RDP;63:NRE:2008, Bangalore, Dated: 25-04-2009.**

Statement showing the releases of IIIrd installment of state share of funds due for the year 2008-09, released during the year 2009-10 under NREGA .

(Rs.in lakhs)

| Sl. No. | District | Central share directly to ZP | | State share proposed for releases as per Column No.4 | Funds being released in this Order |
|---|---|---|---|---|---|
| | | Date | Amount | | |
| 1 | 2 | 3 | 4 | 5 | 8 |
| 1 | Kolar | 31-03-2009 | 49.20 | 5.46 | 5.46 |

**Dr.P.C.JAFFER**

Director,

P.R. 1263

National Rural Employment Guarantee Scheme & E/o.

Dy. Secretary to Government, Rural Development & Panchayat Raj Department.

**ವಿಷಯ:** ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ –ಕರ್ನಾಟಕ ಇದರಡಿ, 2008–09ನೇ ಸಾಲಿನಲ್ಲಿ ಬಾಕಿ ನೀಡಬೇಕಾದ ರಾಜ್ಯದ ಪಾಲಿನ ಅನುದಾನವನ್ನು ಬಿಜಾಪುರ ಜಿಲ್ಲೆಗೆ 2009–10ನೇ ಸಾಲಿನಲ್ಲಿ ಬಿಡುಗಡೆ ಮಾಡುತ್ತಿರುವ ಬಗ್ಗೆ.

**ಉಲ್ಲೇಖ:** ಕೇಂದ್ರ ಸರ್ಕಾರದ ಪತ್ರದ ಸಂ.ಜೆ–12022/15/2008–ಎನ್.ಆರ್.ಇ.ಜಿ.ಎ–ಎಸ್.ಎಲ್ ನಂ.860 ದಿ:06.03.2009.

**ಪ್ರಸ್ತಾವನೆ:**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನಕ್ಕಾಗಿ ಉಲ್ಲೇಖಿತ ಪತ್ರದಲ್ಲಿ 2008–09ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಬಿಜಾಪುರ ಜಿಲ್ಲೆಗೆ ರೂ.137.00 ಲಕ್ಷಗಳನ್ನ ಎರಡನೇ ಕಂತಾಗಿ ನೇರವಾಗಿ ಬಿಡುಗಡೆ ಮಾಡಿ, ಅದಕ್ಕೆ ಪೂರಕವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನವನ್ನು ಹದಿನೈದು ದಿನಗಳೊಳಗಾಗಿ ಬಿಡುಗಡೆ ಮಾಡುವಂತೆ ಆದೇಶಿಸಿರುತ್ತದೆ. 2008–09ನೇ ಸಾಲಿನಲ್ಲಿ ರಾಜ್ಯದಿಂದ ಬಿಡುಗಡೆಗೊಳಿಸಬೇಕಾದ ಅನುದಾನವು, ಅನುದಾನದ ಕೊರತೆಯಿಂದಾಗಿ ಬಿಡುಗಡೆಗೊಳಿಸಲಾಗಲಿಲ್ಲ. ಸದರಿ ರಾಜ್ಯದ ಅನುದಾನವನ್ನು 2009–10ನೇ ಸಾಲಿನಲ್ಲಿ ಬಿಡುಗಡೆಗೊಳಿಸಬೇಕಾಗಿದ್ದು ಸದರಿ ಯೋಜನೆಗೆ ಆಯವ್ಯಯದಲ್ಲಿ ಅನುದಾನವನ್ನು ರಾಜ್ಯದ ಪಾಲಾಗಿ, ಸಾಮಗ್ರಿಗಳ ಬಳಕೆಗಾಗಿ ಶೇಕಡ 10ರಷ್ಟಾಗಿ ಬಿಡುಗಡೆ ಮಾಡಲು ಒದಗಿಸಲಾಗಿರುತ್ತದೆ. ಆದುದರಿಂದ, ಪ್ರಸ್ತುತ ಸಾಲಿನಲ್ಲಿ ಬಿಜಾಪುರ ಜಿಲ್ಲೆಗೆ, ಉದ್ಯೋಗ ಖಾತರಿ ಯೋಜನೆಯಡಿ, ಸಾಮಗ್ರಿಗಳ ಘಟಕದ ಬಳಕೆಗಾಗಿ, ಶೇಕಡಾ 10ರಷ್ಟಾದ ರೂ.13.70 ಲಕ್ಷಗಳನ್ನು ಅನುಬಂಧದಲ್ಲಿ ನಮೂದಿಸಿದಂತೆ, ಬಿಡುಗಡೆ ಮಾಡಲು ನಿರ್ಧರಿಸಿದೆ. ಆದುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂ.ಗ್ರಾಅಪ.34.ಉಖಾಯೋ.09 ಬೆಂಗಳೂರು, ದಿನಾಂಕ: 25ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ– ಕರ್ನಾಟಕ ಇದರಡಿ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ, 2008–09ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಅನುದಾನಕ್ಕೆ ಅನುಗುಣವಾಗಿ ರಾಜ್ಯದ ಪಾಲನ್ನು ಎರಡನೇ ಕಂತಿನ ಅನುದಾನವಾದ ರೂ.13.70 ಲಕ್ಷಗಳನ್ನು (ರೂ. ಹದಿಮೂರು ಲಕ್ಷ ಎಪ್ಪತ್ತು ಸಾವಿರ ಮಾತ್ರ) ಅನುಬಂಧದಲ್ಲಿ ನಮೂದಿಸಿದಂತೆ, ಸಾಮಗ್ರಿ ಘಟಕದ ವೆಚ್ಚಕ್ಕೆ ಬಳಸಲು ಬಿಜಾಪುರ ಜಿಲ್ಲೆಗೆ ಬಿಡುಗಡೆ ಮಾಡಿದೆ.

ಆರ್ಥಿಕ ಇಲಾಖೆಯ ಆದೇಶದ ಸಂ:ಎಫ್‌ಡಿ.7ಜೆಡ್ಬಿಎ. 2003 ದಿನಾಂಕ:14–7–2005 ಮತ್ತು ಸರ್ಕಾರದ ಸುತ್ತೋಲೆ ಸಂ.ಆಇ 01 ಜಿಪಅ 07 ದಿನಾಂಕ:19–01–2007ರಲ್ಲಿನ ಸೂಚನೆಗಳನ್ವಯ ಈ ಕೆಳಕಂಡ ಲೆಕ್ಕಶೀರ್ಷಿಕೆಯಡಿ ಪೇಯಿಸ್ ರಸೀದಿಯ ಮೇಲೆ ಖಜಾನೆಯಿಂದ ಅನುದಾನ ಪಡೆದು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿ ವೆಚ್ಚವನ್ನು ಭರಿಸತಕ್ಕದ್ದು. 2008–09ನೇ ಸಾಲಿನ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಲೆಕ್ಕಶಿರ್ಷಿಕೆ "2505 ಗ್ರಾಮೀಣ ಉದ್ಯೋಗ 02 ಗ್ರಾಮೀಣ ಉದ್ಯೋಗ ಖಾತರಿ ಯೋಜನೆ 101 –ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾರ್ಯಕ್ರಮ 0–01 ಕರ್ನಾಟಕ ಗ್ರಾಮೀಣ ಉದ್ಯೋಗ ಭರವಸೆ ಯೋಜನೆ –059 ಇತರೆ ಖರ್ಚು (ಯೋಜನೆ)" (2505–02–101–0–01–059).

ಈಗ ಬಿಡುಗಡೆ ಮಾಡುವ ಅನುದಾನವನ್ನು ಸಾಮಗ್ರಿ ಘಟಕಕ್ಕೆ ಮಾತ್ರ ಬಳಸಿಕೊಳ್ಳತಕ್ಕದ್ದು. ಪಂಚಾಯತ್ ರಾಜ್ ಸಂಸ್ಥೆಗೆ ಸಂಬಂಧಪಟ್ಟ ಅಧಿಕಾರಿಗಳು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಗೆ ಸಂಬಂಧಿಸಿದಂತೆ ಅಧಿನಿಯಮದ ಪ್ರಕರಣಗಳು, ಕೇಂದ್ರ ಸರ್ಕಾರದ ನಿರ್ವಹಣೆಯ ಮಾರ್ಗಸೂಚಿಗಳು, ಸುತ್ತೋಲೆಗಳು, ಆದೇಶಗಳು ಹಾಗೂ ರಾಜ್ಯ ಸರ್ಕಾರವು ದಿನಾಂಕ:1–2–2007ರಂದು ಅಧಿಸೂಚಿಸಿರುವ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ– ಕರ್ನಾಟಕ ಇದರ ಮಾರ್ಗಸೂಚಿಗಳ ರೀತ್ಯಾ ಕ್ರಮ ತೆಗೆದುಕೊಳ್ಳತಕ್ಕದ್ದು. ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಮತ್ತು ಸಂಬಂಧಿಸಿದ ತಾಲ್ಲೂಕು ಪಂಚಾಯಿತಿಗಳ ಕಾರ್ಯನಿರ್ವಾಹಕ ಅಧಿಕಾರಿಗಳು, ಉಸ್ತುವಾರಿ, ಅನುಷ್ಠಾನ ಮತ್ತು ಜಾಗೃತಿ ಇವುಗಳನ್ನು ಚಲಾಯಿಸುವ ಸಂಪೂರ್ಣ ಜವಾಬ್ದಾರಿ ಅವರುಗಳದಾಗಿರುತ್ತದೆ.

ಸರ್ಕಾರದ ಆದೇಶವನ್ನು ಈ ಇಲಾಖೆಯ ಮುಖ್ಯಸ್ಥರು (ಹಣಕಾಸು ಮತ್ತು ಲೆಕ್ಕಪತ್ರ) ರವರು ಸಹಮತಿಸಿದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ:ಪಿ.ಸಿ.ಜಾಫರ್**

ನಿರ್ದೇಶಕರು

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಹಾಗೂ ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ANNEXURE TO G.O.NO:RDP;34:NRE:2009, Bangalore, Dated: 25-4-2009**

Statement showing the releases of IInd installment of state share of funds, due for the year 2008-09, released during the year 2009-10 under NREGA.

(Rs.in lakhs)

| Sl. No. | District | Central share directly to ZP | | State share proposed for releases as per Column No.4 | Funds being released in this Order |
|---|---|---|---|---|---|
| | | Date | Amount | | |
| 1 | 2 | 3 | 4 | 5 | 8 |
| 1 | Bijapur | 06-03-2009 | 137.00 | 13.70 | 13.70 |

**Dr.P.C.JAFFER**
Director,
P.R. 1264 National Rural Employment Guarantee Scheme & E/o.
Dy. Secretary to Government, Rural Development & Panchayat Raj Department.

**ವಿಷಯ:** ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ –ಕರ್ನಾಟಕ ಇದರಡಿ, 2008–09ನೇ ಸಾಲಿನಲ್ಲಿ ಬಾಕಿ ನೀಡಬೇಕಾದ ರಾಜ್ಯದ ಪಾಲಿನ ಅನುದಾನವನ್ನು ಬೀದರ್ ಜಿಲ್ಲೆಗೆ 2009–10ನೇ ಸಾಲಿನಲ್ಲಿ ಬಿಡುಗಡೆ ಮಾಡುತ್ತಿರುವ ಬಗ್ಗೆ.

**ಉಲ್ಲೇಖ:** ಕೇಂದ್ರ ಸರ್ಕಾರದ ಪತ್ರದ ಸಂ.ಜೆ–20011/1/2008–ಎನ್.ಆರ್.ಇ.ಜಿ.ಎ–ಎಸ್.ಎಲ್ನಂ.1001 ದಿ:31.03.2009.

**ಪ್ರಸ್ತಾವನೆ:**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನಕ್ಕಾಗಿ ಉಲ್ಲೇಖಿತ ಪತ್ರದಲ್ಲಿ 2008–09ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಬೀದರ್ ಜಿಲ್ಲೆಗೆ ರೂ. 510.65 ಲಕ್ಷಗಳನ್ನು ನೇರವಾಗಿ ಬಿಡುಗಡೆ ಮಾಡಿ, ಅದಕ್ಕೆ ಪೂರಕವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನವನ್ನು ಹದಿನೈದು ದಿನಗಳೊಳಗಾಗಿ ಬಿಡುಗಡೆ ಮಾಡುವಂತೆ ಆದೇಶಿಸಿರುತ್ತದೆ. 2008–09ನೇ ಸಾಲಿನಲ್ಲಿ ರಾಜ್ಯದಿಂದ ಬಿಡುಗಡೆಗೊಳಿಸಬೇಕಾದ ಅನುದಾನವು, ಅನುದಾನದ ಕೊರತೆಯಿಂದಾಗಿ ಬಿಡುಗಡೆಗೊಳಿಸಲಾಗಲಿಲ್ಲ. ಸದರಿ ರಾಜ್ಯದ ಪಾಲಿನ ಅನುದಾನವನ್ನು 2009–10ನೇ ಸಾಲಿನಲ್ಲಿ ಬಿಡುಗಡೆಗೊಳಿಸಬೇಕಾಗಿದ್ದು ಸದರಿ ಯೋಜನೆಗೆ ಆಯವ್ಯಯದಲ್ಲಿ ಅನುದಾನವನ್ನು ರಾಜ್ಯದ ಪಾಲಾಗಿ, ಸಾಮಗ್ರಿಗಳ ಬಳಕೆಗಾಗಿ ಶೇಕಡ 11.1 ರಷ್ಟಾಗಿ ಬಿಡುಗಡೆ ಮಾಡಲು ಒದಗಿಸಲಾಗಿರುತ್ತದೆ. ಆದುದರಿಂದ, ಪ್ರಸ್ತುತ ಸಾಲಿನಲ್ಲಿ ಬೀದರ್ ಜಿಲ್ಲೆಗೆ, ಉದ್ಯೋಗ ಖಾತರಿ ಯೋಜನೆಯಡಿ, ಸಾಮಗ್ರಿಗಳ ಘಟಕದ ಬಳಕೆಗಾಗಿ, ಶೇಕಡಾ 11.1 ರಷ್ಟಾದ ರೂ. 56.68 ಲಕ್ಷಗಳನ್ನು ಅನುಬಂಧದಲ್ಲಿ ನಮೂದಿಸಿದಂತೆ, ಬಿಡುಗಡೆ ಮಾಡಲು ನಿರ್ಧರಿಸಿದೆ. ಆದುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂ.ಗ್ರಾಅಪ.16.ಉಖಾಯೋ.09–10(3) ಬೆಂಗಳೂರು, ದಿನಾಂಕ: 24ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ– ಕರ್ನಾಟಕ ಇದರಡಿ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ, 2008–09ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಅನುದಾನಕ್ಕೆ ಅನುಗುಣವಾಗಿ ರಾಜ್ಯದ ಪಾಲನ್ನು ಮೂರನೇ ಕಂತಿನ ಅನುದಾನವಾದ ರೂ.56.68 ಲಕ್ಷಗಳನ್ನು (ರೂ ಐವತ್ತಾರು ಲಕ್ಷದ ಅರವತ್ತೆಂಟು ಸಾವಿರ ಮಾತ್ರ) ಅನುಬಂಧದಲ್ಲಿ ನಮೂದಿಸಿದಂತೆ, ಸಾಮಗ್ರಿ ಘಟಕದ ವೆಚ್ಚಕ್ಕೆ ಬಳಸಲು ಬೀದರ್ ಜಿಲ್ಲೆಗೆ ಬಿಡುಗಡೆ ಮಾಡಿದೆ.

ಆರ್ಥಿಕ ಇಲಾಖೆಯ ಆದೇಶದ ಸಂ:ಎಫ್‌ಡಿ.7ಜೆಡ್ಪಿಎ. 2003 ದಿನಾಂಕ:14–7–2005 ಮತ್ತು ಸರ್ಕಾರದ ಸುತ್ತೋಲೆ ಸಂ.ಆಇ 01 ಜಿಪಅ 07 ದಿನಾಂಕ:19–01–2007ರಲ್ಲಿನ ಸೂಚನೆಗಳನ್ವಯ ಈ ಕೆಳಕಂಡ ಲೆಕ್ಕಶೀರ್ಷಿಕೆಯಡಿ ಪೇಯಿಸ್ ರಸೀದಿಯ ಮೇಲೆ ಖಜಾನೆಯಿಂದ ಅನುದಾನ ಪಡೆದು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿ ವೆಚ್ಚವನ್ನು ಭರಿಸತಕ್ಕದ್ದು.

2008–09ನೇ ಸಾಲಿನ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಲೆಕ್ಕಶಿರ್ಷಿಕೆ "2505 ಗ್ರಾಮೀಣ ಉದ್ಯೋಗ 02 ಗ್ರಾಮೀಣ ಉದ್ಯೋಗ ಖಾತರಿ ಯೋಜನೆ 101 –ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾರ್ಯಕ್ರಮ 0–01 ಕರ್ನಾಟಕ ಗ್ರಾಮೀಣ ಉದ್ಯೋಗ ಭರವಸೆ ಯೋಜನೆ –059 ಇತರೆ ಖರ್ಚು (ಯೋಜನೆ)" (2505–02–101–0–01–059).

ಈಗ ಬಿಡುಗಡೆ ಮಾಡುವ ಅನುದಾನವನ್ನು ಸಾಮಗ್ರಿ ಘಟಕಕ್ಕೆ ಮಾತ್ರ ಬಳಸಿಕೊಳ್ಳತಕ್ಕದ್ದು. ಪಂಚಾಯತ್ ರಾಜ್ ಸಂಸ್ಥೆಗೆ ಸಂಬಂಧಪಟ್ಟ ಅಧಿಕಾರಿಗಳು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಗೆ ಸಂಬಂಧಿಸಿದಂತೆ

ಅಧಿನಿಯಮದ ಪ್ರಕರಣಗಳು, ಕೇಂದ್ರ ಸರ್ಕಾರದ ನಿರ್ವಹಣೆಯ ಮಾರ್ಗಸೂಚಿಗಳು, ಸುತ್ತೋಲೆಗಳು, ಆದೇಶಗಳು ಹಾಗೂ ರಾಜ್ಯ ಸರ್ಕಾರವು ದಿನಾಂಕ:1–2–2007ರಂದು ಅಧಿಸೂಚಿಸಿರುವ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ–ಕರ್ನಾಟಕ ಇದರ ಮಾರ್ಗಸೂಚಿಗಳ ರೀತ್ಯಾ ಕ್ರಮ ತೆಗೆದುಕೊಳ್ಳತಕ್ಕದ್ದು. ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಮತ್ತು ಸಂಬಂಧಿಸಿದ ತಾಲ್ಲೂಕು ಪಂಚಾಯಿತಿಗಳ ಕಾರ್ಯನಿರ್ವಾಹಕ ಅಧಿಕಾರಿಗಳು, ಉಸ್ತುವಾರಿ, ಅನುಷ್ಠಾನ ಮತ್ತು ಜಾಗೃತಿ ಇವುಗಳನ್ನು ಚಲಾಯಿಸುವ ಸಂಪೂರ್ಣ ಜವಾಬ್ದಾರಿ ಅವರುಗಳದಾಗಿರುತ್ತದೆ.

ಸರ್ಕಾರದ ಆದೇಶವನ್ನು ಈ ಇಲಾಖೆಯ ನಿರ್ದೇಶನಾಲಯದ ನಿಯಂತ್ರಕರು (ಹಣಕಾಸು ಮತ್ತು ಲೆಕ್ಕಪತ್ರ ಇವರಲ್ಲಿ ಸಹಮತಿಸಿದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ:ಪಿಸಿ.ಜಾಫರ್**

ನಿರ್ದೇಶಕರು

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಹಾಗೂ ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ANNEXURE TO G.O.NO:RDP;16:NRE:2009, Bangalore, Dated: 24-4-2009**

Statement showing the releases of IIIrd installment of state share of funds, due for the year 2008-09, released during the year 2009-10 under NREGA .

(Rs.in lakhs)

| Sl. No. | District | Central share directly to ZP | | State share proposed for releases as per Column No.4 | Funds being released in this Order |
|---|---|---|---|---|---|
| | | Date | Amount | | |
| 1 | 2 | 3 | 4 | 5 | 8 |
| 1 | Bidar | 31-03-2009 | 510-65 | 56.68 | 56.68 |

**Dr.P.C.JAFFER**

Director,

P.R. 1265

National Rural Employment Guarantee Scheme & E/o.

Dy. Secretary to Government, Rural Development & Panchayat Raj Department.

**ವಿಷಯ:** ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ –ಕರ್ನಾಟಕ ಇದರಡಿ, 2008–09ನೇ ಸಾಲಿನಲ್ಲಿ ಬಾಕಿ ನೀಡಬೇಕಾದ ರಾಜ್ಯದ ಪಾಲಿನ ಅನುದಾನವನ್ನು ಗದಗ್ ಜಿಲ್ಲೆಗೆ 2009–10ನೇ ಸಾಲಿನಲ್ಲಿ ಮೂರನೇ ಕಂತಿನ ರಾಜ್ಯದ ಪಾಲನ್ನು ಬಿಡುಗಡೆ ಮಾಡುತ್ತಿರುವ ಬಗ್ಗೆ

**ಉಲ್ಲೇಖ:** ಕೇಂದ್ರ ಸರ್ಕಾರದ ಪತ್ರದ ಸಂ.ಜೆ–12022/2/3/2008–ಎನ್.ಆರ್.ಇ.ಜಿ.ಎ–ಎಸ್.ಎಲ್ ನಂ.840 ದಿ:03.03.2009.

**ಪ್ರಸ್ತಾವನೆ:**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನಕ್ಕಾಗಿ ಉಲ್ಲೇಖಿತ ಪತ್ರದಲ್ಲಿ 2008–09ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಗದಗ ಜಿಲ್ಲೆಗೆ ರೂ. 599.00 ಲಕ್ಷಗಳನ್ನು ಮೂರನೇ ಕಂತಾಗಿ ನೇರವಾಗಿ ಬಿಡುಗಡೆ ಮಾಡಿ, ಅದಕ್ಕೆ ಪೂರಕವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನವನ್ನು ಹದಿನೈದು ದಿನಗಳೊಳಗಾಗಿ ಬಿಡುಗಡೆ ಮಾಡುವಂತೆ ಆದೇಶಿಸಿರುತ್ತದೆ. 2008–09ನೇ ಸಾಲಿನಲ್ಲಿ ರಾಜ್ಯದಿಂದ ಬಿಡುಗಡೆಗೊಳಿಸಬೇಕಾದ ಅನುದಾನವು, ಅನುದಾನದ ಕೊರತೆಯಿಂದಾಗಿ ಬಿಡುಗಡೆಗೊಳಿಸಲಾಗಲಿಲ್ಲ. ಸದರಿ ರಾಜ್ಯದ ಅನುದಾನವನ್ನು 2009–10ನೇ ಸಾಲಿನಲ್ಲಿ ಬಿಡುಗಡೆಗೊಳಿಸಬೇಕಾಗಿದ್ದು ಸದರಿ ಯೋಜನೆಗೆ ಆಯವ್ಯಯದಲ್ಲಿ ಅನುದಾನವನ್ನು ರಾಜ್ಯದ ಪಾಲಾಗಿ, ಸಾಮಗ್ರಿಗಳ ಬಳಕೆಗಾಗಿ ಶೇಕಡ 10ರಷ್ಟಾಗಿ ಬಿಡುಗಡೆ ಮಾಡಲು ಒದಗಿಸಲಾಗಿರುತ್ತದೆ. ಆದುದರಿಂದ, ಪ್ರಸ್ತುತ ಸಾಲಿನಲ್ಲಿ ಗದಗ ಜಿಲ್ಲೆಗೆ, ಉದ್ಯೋಗ ಖಾತರಿ ಯೋಜನೆಯಡಿ, ಸಾಮಗ್ರಿಗಳ ಘಟಕದ ಬಳಕೆಗಾಗಿ, ಶೇಕಡಾ 10ರಷ್ಟಾದ ರೂ.59.90 ಲಕ್ಷಗಳನ್ನು ಅನುಬಂಧದಲ್ಲಿ ನಮೂದಿಸಿದಂತೆ, ಬಿಡುಗಡೆ ಮಾಡಲು ನಿರ್ಧರಿಸಿದೆ. ಆದುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂ.ಗ್ರಾಅಪ.155.ಉಖಾಯೋ.08 ಬೆಂಗಳೂರು, ದಿನಾಂಕ: 25ನೇ ಏಪ್ರಿಲ್ 2009.**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ– ಕರ್ನಾಟಕ ಇದರಡಿ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ, 2008–09ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಅನುದಾನಕ್ಕೆ ಅನುಗುಣವಾಗಿ ರಾಜ್ಯದ ಪಾಲನ್ನು ಮೂರನೇ ಕಂತಿನ ಅನುದಾನವಾದ ರೂ.59.90 ಲಕ್ಷಗಳನ್ನು (ರೂ. ಐವತ್ತೊಂಭತ್ತು ಲಕ್ಷ ತ್ತೊಂಭತ್ತು ಸಾವಿರ ಮಾತ್ರ) ಅನುಬಂಧದಲ್ಲಿ ನಮೂದಿಸಿದಂತೆ, ಸಾಮಗ್ರಿ ಘಟಕದ ವೆಚ್ಚಕ್ಕೆ ಬಳಸಲು ಗದಗ ಜಿಲ್ಲೆಗೆ ಬಿಡುಗಡೆ ಮಾಡಿದೆ.

ಆರ್ಥಿಕ ಇಲಾಖೆಯ ಆದೇಶದ ಸಂ:ಎಫ್‌ಡಿ.7ಜೆಡ್ಪಿಎ. 2003 ದಿನಾಂಕ:14–7–2005 ಮತ್ತು ಸರ್ಕಾರದ ಸುತ್ತೋಲೆ ಸಂ.ಆಇ 01 ಜಿಪಆ 07 ದಿನಾಂಕ:19–01–2007ರಲ್ಲಿನ ಸೂಚನೆಗಳನ್ವಯ ಈ ಕೆಳಕಂಡ ಲೆಕ್ಕಶೀರ್ಷಿಕೆಯಡಿ ಪೇಯಿಸ್ ರಸೀದಿಯ ಮೇಲೆ ಖಜಾನೆಯಿಂದ ಅನುದಾನ ಪಡೆದು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿ ವೆಚ್ಚವನ್ನು ಭರಿಸತಕ್ಕದ್ದು. 2008–09ನೇ ಸಾಲಿನ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಲೆಕ್ಕಶಿರ್ಷಿಕೆ "2505 ಗ್ರಾಮೀಣ ಉದ್ಯೋಗ 02 ಗ್ರಾಮೀಣ ಉದ್ಯೋಗ ಖಾತರಿ ಯೋಜನೆ 101 –ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾರ್ಯಕ್ರಮ 0–01 ಕರ್ನಾಟಕ ಗ್ರಾಮೀಣ ಉದ್ಯೋಗ ಭರವಸೆ ಯೋಜನೆ –059 ಇತರೆ ಖರ್ಚು (ಯೋಜನೆ)" (2505–02–101–0–01–059).

ಈಗ ಬಿಡುಗಡೆ ಮಾಡುವ ಅನುದಾನವನ್ನು ಸಾಮಗ್ರಿ ಘಟಕಕ್ಕೆ ಮಾತ್ರ ಬಳಸಿಕೊಳ್ಳತಕ್ಕದ್ದು. ಪಂಚಾಯತ್ ರಾಜ್ ಸಂಸ್ಥೆಗೆ ಸಂಬಂಧಪಟ್ಟ ಅಧಿಕಾರಿಗಳು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಗೆ ಸಂಬಂಧಿಸಿದಂತೆ ಅಧಿನಿಯಮದ ಪ್ರಕರಣಗಳು, ಕೇಂದ್ರ ಸರ್ಕಾರದ ನಿರ್ವಹಣೆಯ ಮಾರ್ಗಸೂಚಿಗಳು, ಸುತ್ತೋಲೆಗಳು, ಆದೇಶಗಳು ಹಾಗೂ ರಾಜ್ಯ ಸರ್ಕಾರವು ದಿನಾಂಕ: 1–2–2007ರಂದು ಅಧಿಸೂಚಿಸಿರುವ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ– ಕರ್ನಾಟಕ ಇದರ ಮಾರ್ಗಸೂಚಿಗಳ ರೀತ್ಯಾ ಕ್ರಮ ತೆಗೆದುಕೊಳ್ಳತಕ್ಕದ್ದು. ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಮತ್ತು ಸಂಬಂಧಿಸಿದ ತಾಲ್ಲೂಕು ಪಂಚಾಯಿತಿಗಳ ಕಾರ್ಯನಿರ್ವಾಹಕ ಅಧಿಕಾರಿಗಳು, ಉಸ್ತುವಾರಿ, ಅನುಷ್ಠಾನ ಮತ್ತು ಜಾಗೃತಿ ಇವುಗಳನ್ನು ಚಲಾಯಿಸುವ ಸಂಪೂರ್ಣ ಜವಾಬ್ದಾರಿ ಅವರುಗಳದಾಗಿರುತ್ತದೆ.

ಸರ್ಕಾರದ ಆದೇಶವನ್ನು ಈ ಇಲಾಖೆಯ ಮುಖ್ಯಸ್ಥರು (ಹಣಕಾಸು ಮತ್ತು ಲೆಕ್ಕಪತ್ರ) ರವರು ಸಹಮತಿಸಿದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಾ:ಪಿಸಿ.ಜಾಫರ್**
ನಿರ್ದೇಶಕರು
ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ANNEXURE TO G.O.NO:RDP;155:NRE:2008, Bangalore, Dated: 25-4-2009**

Statement showing the releases of IIIrd installment of state share of funds, due for the year 2008-09 released during the year 2009-10 under NREGA .

(Rs.in lakhs)

| Sl. No. | District | Central share directly to ZP | | State share proposed for releases as per Column No.4 | Funds being released in this Order |
|---|---|---|---|---|---|
| | | Date | Amount | | |
| 1 | 2 | 3 | 4 | 5 | 8 |
| 1 | Gadag | 03-03-2009 | 599.00 | 59.90 | 59.90 |

**Dr.P.C.JAFFER**
Director,
National Rural Employment Guarantee Scheme & E/o.
Dy. Secretary to Government, Rural Development & Panchayat Raj Department.

P.R. 1266

**ವಿಷಯ:** ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ –ಕರ್ನಾಟಕ ಇದರಡಿ, 2008–09ನೇ ಸಾಲಿನಲ್ಲಿ ಬಾಕಿ ನೀಡಬೇಕಾದ ರಾಜ್ಯದ ಪಾಲಿನ ಅನುದಾನವನ್ನು ಬಳ್ಳಾರಿ ಜಿಲ್ಲೆಗೆ ಮೂರನೇ ಕಂತಿನ ರಾಜ್ಯದ ಅನುದಾನ 2009–10ನೇ ಸಾಲಿನಲ್ಲಿ ಬಿಡುಗಡೆ ಮಾಡುತ್ತಿರುವ ಬಗ್ಗೆ.

**ಉಲ್ಲೇಖ:** ಕೇಂದ್ರ ಸರ್ಕಾರದ ಪತ್ರದ ಸಂ.ಜೆ–12022/2/4/2008–ಎನ್.ಆರ್.ಇ.ಜಿ.ಎ–ಎಸ್.ಎಲ್ ನಂ.841 ದಿ:03.03.2009

**ಪ್ರಸ್ತಾವನೆ:–**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನಕ್ಕಾಗಿ ಉಲ್ಲೇಖಿತ ಪತ್ರದಲ್ಲಿ 2008–09ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಬಳ್ಳಾರಿ ಜಿಲ್ಲೆಗೆ ರೂ.2092.00 ಲಕ್ಷಗಳನ್ನು ಮೂರನೇ ಕಂತಾಗಿ ನೇರವಾಗಿ ಬಿಡುಗಡೆ ಮಾಡಿ, ಅದಕ್ಕೆ ಪೂರಕವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನವನ್ನು ಹದಿನೈದು ದಿನಗಳೊಳಗಾಗಿ ಬಿಡುಗಡೆ ಮಾಡುವಂತೆ ಆದೇಶಿಸಿರುತ್ತದೆ. 2008–09ನೇ ಸಾಲಿನಲ್ಲಿ ರಾಜ್ಯದಿಂದ ಬಿಡುಗಡೆಗೊಳಿಸಬೇಕಾದ ಅನುದಾನವು, ಅನುದಾನದ ಕೊರತೆಯಿಂದಾಗಿ ಬಿಡುಗಡೆಗೊಳಿಸಲಾಗಲಿಲ್ಲ. ಸದರಿ ರಾಜ್ಯದ ಅನುದಾನವನ್ನು 2009–10ನೇ ಸಾಲಿನಲ್ಲಿ ಬಿಡುಗಡೆಗೊಳಿಸಬೇಕಾಗಿದ್ದು ಸದರಿ ಯೋಜನೆಗೆ ಆಯವ್ಯಯದಲ್ಲಿ ಅನುದಾನವನ್ನು ರಾಜ್ಯದ ಪಾಲಾಗಿ, ಸಾಮಗ್ರಿಗಳ ಬಳಕೆಗಾಗಿ ಶೇಕಡ 10ರಷ್ಟಾಗಿ ಬಿಡುಗಡೆ ಮಾಡಲು ಒದಗಿಸಲಾಗಿರುತ್ತದೆ. ಆದುದರಿಂದ, ಪ್ರಸ್ತುತ ಸಾಲಿನಲ್ಲಿ ಬಳ್ಳಾರಿ ಜಿಲ್ಲೆಗೆ, ಉದ್ಯೋಗ ಖಾತರಿ ಯೋಜನೆಯಡಿ, ಸಾಮಗ್ರಿಗಳ ಘಟಕದ ಬಳಕೆಗಾಗಿ, ಶೇಕಡಾ 10ರಷ್ಟಾದ ರೂ.209.20 ಲಕ್ಷಗಳನ್ನು ಅನುಬಂಧದಲ್ಲಿ ನಮೂದಿಸಿದಂತೆ, ಬಿಡುಗಡೆ ಮಾಡಲು ನಿರ್ಧರಿಸಿದೆ. ಆದುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂ.ಗ್ರಾಅಪ.121.ಉಖಾಯೋ.08 ಬೆಂಗಳೂರು, ದಿನಾಂಕ: 25ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ– ಕರ್ನಾಟಕ ಇದರಡಿ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ, 2008–09ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಅನುದಾನಕ್ಕೆ ಅನುಗುಣವಾಗಿ ರಾಜ್ಯದ ಪಾಲನ್ನು ಮೂರನೇ ಕಂತಿನ ಅನುದಾನವಾದ ರೂ. 209.20 ಲಕ್ಷಗಳನ್ನು (ರೂ. ಎರಡು ಕೋಟಿ ಒಂಭತ್ತು ಲಕ್ಷ ಇಪ್ಪತ್ತು ಸಾವಿರ ಮಾತ್ರ) ಅನುಬಂಧದಲ್ಲಿ ನಮೂದಿಸಿದಂತೆ, ಸಾಮಗ್ರಿ ಘಟಕದ ವೆಚ್ಚಕ್ಕೆ ಬಳಸಲು ಬಳ್ಳಾರಿ ಜಿಲ್ಲೆಗೆ ಬಿಡುಗಡೆ ಮಾಡಿದೆ.

ಆರ್ಥಿಕ ಇಲಾಖೆಯ ಆದೇಶದ ಸಂ:ಎಫ್‌ಡಿ.7ಜೆಡ್ಪಿಎ. 2003 ದಿನಾಂಕ:14–7–2005 ಮತ್ತು ಸರ್ಕಾರದ ಸುತ್ತೋಲೆ ಸಂ.ಆಇ 01 ಜಿಪಅ 07 ದಿನಾಂಕ:19–01–2007ರಲ್ಲಿನ ಸೂಚನೆಗಳನ್ವಯ ಈ ಕೆಳಕಂಡ ಲೆಕ್ಕಶೀರ್ಷಿಕೆಯಡಿ ಪೇಯಿಸ್ ರಸೀದಿಯ ಮೇಲೆ ಖಜಾನೆಯಿಂದ ಅನುದಾನ ಪಡೆದು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿ ವೆಚ್ಚವನ್ನು ಭರಿಸತಕ್ಕದ್ದು. 2008–09ನೇ ಸಾಲಿನ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಲೆಕ್ಕಶೀರ್ಷಿಕೆ "2505 ಗ್ರಾಮೀಣ ಉದ್ಯೋಗ 02 ಗ್ರಾಮೀಣ ಉದ್ಯೋಗ ಖಾತರಿ ಯೋಜನೆ 101 –ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾರ್ಯಕ್ರಮ 0–01 ಕರ್ನಾಟಕ ಗ್ರಾಮೀಣ ಉದ್ಯೋಗ ಭರವಸೆ ಯೋಜನೆ –059 ಇತರೆ ಖರ್ಚು (ಯೋಜನೆ)" (2505–02–101–0–01–059).

ಈಗ ಬಿಡುಗಡೆ ಮಾಡುವ ಅನುದಾನವನ್ನು ಸಾಮಗ್ರಿ ಘಟಕಕ್ಕೆ ಮಾತ್ರ ಬಳಸಿಕೊಳ್ಳತಕ್ಕದ್ದು. ಪಂಚಾಯತ್ ರಾಜ್ ಸಂಸ್ಥೆಗೆ ಸಂಬಂಧಪಟ್ಟ ಅಧಿಕಾರಿಗಳು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಗೆ ಸಂಬಂಧಿಸಿದಂತೆ ಅಧಿನಿಯಮದ ಪ್ರಕರಣಗಳು, ಕೇಂದ್ರ ಸರ್ಕಾರದ ನಿರ್ವಹಣೆಯ ಮಾರ್ಗಸೂಚಿಗಳು, ಸುತ್ತೋಲೆಗಳು, ಆದೇಶಗಳು ಹಾಗೂ ರಾಜ್ಯ ಸರ್ಕಾರವು ದಿನಾಂಕ: 1–2–2007ರಂದು ಅಧಿಸೂಚಿಸಿರುವ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ– ಕರ್ನಾಟಕ ಇದರ ಮಾರ್ಗಸೂಚಿಗಳ ರೀತ್ಯಾ ಕ್ರಮ ತೆಗೆದುಕೊಳ್ಳತಕ್ಕದ್ದು. ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಮತ್ತು ಸಂಬಂಧಿಸಿದ ತಾಲ್ಲೂಕು ಪಂಚಾಯಿತಿಗಳ ಕಾರ್ಯನಿರ್ವಾಹಕ ಅಧಿಕಾರಿಗಳು, ಉಸ್ತುವಾರಿ, ಅನುಷ್ಠಾನ ಮತ್ತು ಜಾಗೃತಿ ಇವುಗಳನ್ನು ಚಲಾಯಿಸುವ ಸಂಪೂರ್ಣ ಜವಾಬ್ದಾರಿ ಅವರುಗಳದಾಗಿರುತ್ತದೆ.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಮುಖ್ಯಸ್ಥರು (ಹಣಕಾಸು ಮತ್ತು ಲೆಕ್ಕಪತ್ರ) ರವರು ಸಹಮತಿಸಿದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ:ಪಿ.ಸಿ.ಜಾಫರ್**

ನಿರ್ದೇಶಕರು

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಹಾಗೂ ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ANNEXURE TO G.O.NO:RDP;121:NRE:2008, Bangalore, Dated: 25-4-2009**

Statement showing the releases of IIIrd installment of state share of funds , due for the year 2008-09, released during the year 2009-10 under NREGA.

(Rs.in lakhs)

| Sl. No. | District | Central share directly to ZP | | State share proposed for releases as per Column No.4 | Funds being released in this Order |
|---|---|---|---|---|---|
| | | Date | Amount | | |
| 1 | 2 | 3 | 4 | 5 | 8 |
| 1 | Bellary | 03-03-2009 | 2092.00 | 209.20 | 209.20 |

**Dr.P.C.JAFFER**

Director,

P.R. 1267

National Rural Employment Guarantee Scheme & E/o.

Dy. Secretary to Government, Rural Development & Panchayat Raj Department.

**ವಿಷಯ:** ಎಸ್‌ಜಿಎಸ್‌ವೈ ಯೋಜನೆಯಡಿ 2009–2010ನೇ ಸಾಲಿಗೆ ಆರ್ಥಿಕ ಮತ್ತು ಭೌತಿಕ ಗುರಿ ಹಾಗೂ ಕ್ರಿಯಾ ಯೋಜನೆ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 25 ಎಸ್‌ಜೆವೈ 2008, ಬೆಂಗಳೂರು ದಿನಾಂಕ:18.04.09.
2. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ ಜಿ 20011/03/2009–ಎಸ್‌ಜಿಎಸ್‌ವೈ 1:ದಿನಾಂಕ08.04.09.
3. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ ಜೆ12022/1/2009 ಎಸ್‌ಜಿಎಸ್‌ವೈ1(10) ದಿನಾಂಕ:16.04.09.
4. ಕೇಂದ್ರ ಸರ್ಕಾರದ ಅ.ಸ.ಪತ್ರ ಸಂಖ್ಯೆ: 1/12011/5/2009 ಎಸ್‌ಜಿಎಸ್‌ವೈ (ಸಿ) ದಿನಾಂಕ:23.03.2009 ಮತ್ತು 01.04.2009.

**ಪ್ರಸ್ತಾವನೆ:**

ಉಲ್ಲೇಖ (1) ರ ಆದೇಶದ ಮೇರೆಗೆ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯನ್ನು 2009–10 ನೇ ಸಾಲಿನಲ್ಲಿ ಮುಂದುವರೆಸಲಾಗಿದೆ. ಕೇಂದ್ರ ಸರ್ಕಾರವು ಈ ಯೋಜನೆಯ ಅನುಷ್ಠಾನಕ್ಕಾಗಿ 2009–10ನೇ ಸಾಲಿಗೆ ರೂ.10961.00 ಲಕ್ಷಗಳನ್ನು ಉಲ್ಲೇಖ (2) ರಂತೆ ಹಂಚಿಕೆ ಮಾಡಿ, ಕೇಂದ್ರದ ಪಾಲಿನ ಅನುದಾನ ರೂ.8221.00 ಲಕ್ಷ ಮತ್ತು ರಾಜ್ಯದ ಪಾಲಿನ ಅನುದಾನ ರೂ.2740.00 ಲಕ್ಷಗಳನ್ನು ನಿಗದಿಪಡಿಸಿದೆ. ಈ ಯೋಜನೆಯನ್ನು ರಾಜ್ಯದಲ್ಲಿ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವುದಕ್ಕೆ ಆರ್ಥಿಕ ಮತ್ತು ಭೌತಿಕ ಗುರಿಯ ಕ್ರಿಯಾ ಯೋಜನೆಯನ್ನು ಜಿಲ್ಲೆಗಳಿಗೆ ನೀಡಬೇಕಾಗಿದೆ. ಯೋಜನೆಯ ಮಾರ್ಗಸೂಚಿಯಂತೆ, ನಿಗದಿತ ಅನುದಾನದ ಶೇ.10 ರಷ್ಟು ತರಬೇತಿಗೆ, ಶೇ.10ರಷ್ಟು ಸುತ್ತುನಿಧಿಗೆ ಮತ್ತು ಶೇ.20 ರಷ್ಟು ಮೂಲಭೂತ ಸೌಕರ್ಯಕ್ಕೆ ನಿಗದಿ ಪಡಿಸಬೇಕಾಗಿದೆ. ಈ ಯೋಜನೆಯ ನೆರವನ್ನು ಮಹಿಳೆಯರಿಗೆ (ಶೇ.40) ಹಾಗೂ ಗ್ರಾಮೀಣ ಭಾಗದ ಎಲ್ಲಾ ವರ್ಗಗಳಿಗೂ ದೊರಕಿಸಿಕೊಡುವ ಉದ್ದೇಶದಿಂದ ಪರಿಶಿಷ್ಟ ಜಾತಿ (ಶೇ.42) ಪರಿಶಿಷ್ಟ ಪಂಗಡ (ಶೇ.8), ಅಲ್ಪಸಂಖ್ಯಾತರು (ಶೇ.15) ಹಾಗೂ ಅಂಗವಿಕಲರುಗಳಿಗೆ (ಶೇ.3) ನಿಗದಿಪಡಿಸಬೇಕಾಗಿದೆ.

ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ 2009–10 ನೇ ಸಾಲಿನಲ್ಲಿ ಫಲಾನುಭವಿಗಳಿಗೆ ಅಗತ್ಯ ಸಾಲ ನೀಡಿಕೆಗಾಗಿ ರಾಜ್ಯಕ್ಕೆ ರೂ.18,118.65 ಲಕ್ಷಗಳ ಗುರಿ ನಿಗದಿಪಡಿಸಿ ಕೇಂದ್ರ ಸರ್ಕಾರವು ಉಲ್ಲೇಖ (4) ರ ಮೂಲಕ ತಿಳಿಸಿದೆ. ಇದನ್ನು ಜಿಲ್ಲಾವಾರು ವಿಂಗಡಿಸಿ ರಾಜ್ಯದ ಎಲ್ಲಾ ಜಿಲ್ಲೆಗಳಿಗೆ 2009–10 ನೇ ಸಾಲಿಗೆ ಸಾಲ ನೀಡಿಕೆ ಗುರಿಯಾಗಿ ನಿಗದಿ ಪಡಿಸಬೇಕಾಗಿದೆ.

ಎಸ್‌ಜಿಎಸ್‌ವೈ ಅಡಿ ಕೇಂದ್ರವು ತನ್ನ ಪಾಲಿನ ಅನುದಾನದ ಮೊದಲನೆಯ ಕಂತಿನ ಹಣವನ್ನು ನೇರವಾಗಿ ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತಿಗಳಿಗೆ ಉಲ್ಲೇಖ (3) ರಲ್ಲಿ ಬಿಡುಗಡೆ ಮಾಡಿದೆ. ಕೆಲವು ಜಿಲ್ಲಾ ಪಂಚಾಯತಿಗಳಲ್ಲಿ 2009–10 ನೇ ಸಾಲಿಗೆ ಯೋಜನೆಯಡಿ ಆರಂಭಿಕ ಶಿಲ್ಕು ಲಭ್ಯವಿರುತ್ತದೆ. ಈ ಹಿನ್ನೆಲೆಯಲ್ಲಿ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಬೇಕಾಗಿರುವುದರಿಂದ 2009–10ನೇ ಸಾಲಿಗೆ ಕ್ರಿಯಾ ಯೋಜನೆಯನ್ನು ತಯಾರಿಸ ಬೇಕಾಗಿರುವುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 8 ಎಸ್‌ಜೆವೈ 2009, ಬೆಂಗಳೂರು, ದಿನಾಂಕ: 5ನೇ ಮೇ 2009**

ಎಸ್‌ಜಿಎಸ್‌ವೈ ಯಡಿ 2009–10 ನೇ ಸಾಲಿಗೆ ಜಿಲ್ಲಾವಾರು ನಿಗದಿಪಡಿಸಿದ ಆರ್ಥಿಕ ಮತ್ತು ಭೌತಿಕ ಗುರಿಯನ್ನು ಇದಕ್ಕೆ ಲಗತ್ತಿಸಿರುವ ಅನುಬಂಧ 1, 2, 3 ಮತ್ತು 3ಎ ರಲ್ಲಿ ಹಾಗೂ ಅನುಬಂಧ 4 ರಲ್ಲಿ ಕ್ಲಸ್ಟರ್, ಅನುಬಂಧ 5 ರಲ್ಲಿ ಜಿಲ್ಲೆಯಲ್ಲಿ ತೆಗೆದುಕೊಳ್ಳಬಹುದಾದ ವಿವಿಧ ಚಟುವಟಿಕೆಗಳು, ಅನುಬಂಧ–6 ರಲ್ಲಿ ಈ ಯೋಜನೆಯಲ್ಲಿ ತರಬೇತಿ ನೀಡಲು ತರಬೇತಿ ಕೇಂದ್ರಗಳನ್ನು ಗುರುತಿಸಿದೆ. 2009–10 ನೇ ಸಾಲಿಗೆ ಮಾಹೆವಾರು ಮಾಡಬೇಕಾದ ಕ್ಯಾಲೆಂಡರ್ ಆಫ್ ಈವೆಂಟ್ಸ್ (ಪುಟ ಸಂಖ್ಯೆ.16 ರಿಂದ 23ರ ವರೆಗೆ) ಕೂಡಾ ಲಗತ್ತಿಸಿದೆ. ಇದರಂತೆ ಎಲ್ಲಾ ಜಿಲ್ಲಾ ಪಂಚಾಯತಿಗಳು ಕ್ರಮ ವಹಿಸುವುದು.

ಯೋಜನೆಯನ್ನು ಅನುಷ್ಠಾನಗೊಳಿಸುವಾಗ ಈ ಕೆಳಕಂಡ ಅಂಶಗಳಿಗೆ ಹೆಚ್ಚಿನ ಆದ್ಯತೆ ನೀಡುವುದು.

- ಯೋಜನೆಯಡಿ ಆರ್ಥಿಕ, ಭೌತಿಕ, ಸಾಲ ನೀಡಿಕೆ (ಕ್ರೆಡಿಟ್ ಮೊಬಿಲೈಸೇಷನ್) ಮತ್ತು ವರ್ಗಾವಾರು ಗುರಿಯನ್ನು ನಿಗದಿ ಪಡಿಸಿರುವಂತೆ (ಅನುಬಂಧ 1, 2, 3 ಮತ್ತು 3ಎ) ಜಿಲ್ಲೆಗಳು ಪ್ರಗತಿಯನ್ನು ಸಾಧಿಸತಕ್ಕದ್ದು.
- ಸದರಿ ವರ್ಷದಲ್ಲಿ ಸಹಾಯಧನವನ್ನು ಗುಂಪು ಫಲಾನುಭವಿಗಳಿಗೆ ಮಾತ್ರ ನೀಡುವುದು. ಆದರೆ ವೈಯಕ್ತಿಕ ಅಂಗವಿಕಲರಿಗೆ ಸಹಾಯಧನವನ್ನು ನೀಡಬಹುದು.
- ಎಸ್‌ಜಿಎಸ್‌ವೈ ಮಾರ್ಗಸೂಚಿಯಂತೆ, ಪರಿಶಿಷ್ಟ ಜಾತಿಗೆ ಶೇ.42, ಪರಿಶಿಷ್ಟ ಪಂಗಡಕ್ಕೆ ಶೇ.8, ಮಹಿಳೆಯರಿಗೆ ಶೇ.40, ಅಲ್ಪಸಂಖ್ಯಾತರಿಗೆ ಶೇ.15 ಹಾಗೂ ಅಂಗವಿಕಲರಿಗೆ ಶೇ.3 ನೀಡಬೇಕಾದ ಶೇಕಡಾವಾರು ಸೌಲಭ್ಯವನ್ನು ಗಮನದಲ್ಲಿಟ್ಟು ಕೊಂಡು ಕ್ರಿಯಾ ಯೋಜನೆ ತಯಾರಿಸಿ ಸರ್ಕಾರದ ಗಮನಕ್ಕೆ ತಂದು ಅನುಷ್ಠಾನಗೊಳಿಸತಕ್ಕದ್ದು.
- ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಎಸ್‌ಜಿಎಸ್‌ವೈ ಸಭೆಯನ್ನು ಮಾರ್ಗಸೂಚಿಯನ್ವಯ ನಿಯತವಾಗಿ ಮಾಡುವುದು.
- 2009–10 ನೇ ಸಾಲಿನಲ್ಲಿ ಪ್ರೈಮರಿ ಚಟುವಟಿಕೆಗೆ ಶೇ.70 ರಷ್ಟು (ಪ್ರೈಮರಿ ಚಟುವಟಿಕೆಗಳಾದ ಹೈನುಗಾರಿಕೆ ಮತ್ತು ಇತರೆ ಪ್ರಾಣಿಗಳ ಸಾಕಾಣಿಕೆ ಶೇ.60 ರಷ್ಟು ಹಾಗೂ ನೀರಾವರಿ ಮತ್ತು ಭೂಆಧಾರಿತ ಚಟುವಟಿಕೆಗಳಿಗೆ ಶೇ.10 ರಷ್ಟು) ಹಾಗೂ ಸೆಕೆಂಡರಿ ಮತ್ತು ಟರ್‌ಶಿಯರಿ ಚಟುವಟಿಕೆಗಳಿಗೆ ಶೇ.30 ರಷ್ಟನ್ನು ನಿಗದಿಪಡಿಸಲಾಗಿದೆ. ಜಿಲ್ಲೆಗಳು ಕ್ರಿಯಾ ಯೋಜನೆ ತಯಾರಿಸುವಾಗ, ಜಿಲ್ಲೆಯಲ್ಲಿನ ಪ್ರಮುಖ ಸೆಕೆಂಡರಿ ಮತ್ತು ಟರ್‌ಶಿಯರಿ ಚಟುವಟಿಕೆಗಳಿಗೆ ನಿಯಮಾನುಸಾರ ಆದ್ಯತೆ ನೀಡುವುದು.
- ಆಯಾ ಅಂಶಗಳಿಗೆ ನಿಗದಿಪಡಿಸಿದ ಅನುದಾನವನ್ನು ಕಡ್ಡಾಯವಾಗಿ ಆಯಾ ಅಂಶಗಳಿಗೆ ನೀಡಿ ಅನುಷ್ಠಾನಗೊಳಿಸುವುದು.
- ಒಂದು ಜಿಲ್ಲೆಯಿಂದ 4–5 ಕಸ್ಟರ್ ಪದ್ಧತಿಯನ್ನು ಅಭಿವೃದ್ಧಿ ಪಡಿಸಿ ಅನುಷ್ಠಾನಗೊಳಿಸುವುದು.
- ಕೇಂದ್ರ ಸರ್ಕಾರಕ್ಕೆ ಎರಡನೇ ಕಂತಿನ ಹಣ ಬಿಡುಗಡೆಗೆ ಪ್ರಸ್ತಾವನೆ ಕಳುಹಿಸುವ ಮುನ್ನ ಪ್ರಸಕ್ತ ಸಾಲಿನಲ್ಲಿ ಈ ಯೋಜನೆಯಡಿ ಜಿಲ್ಲೆಗಳಲ್ಲಿ ಲಭ್ಯವಿರುವ ಹಣದ ಶೇ 60 ರಷ್ಟು ವೆಚ್ಚ ಮಾಡಿರಬೇಕು.
- 2008–2009 ನೇ ಸಾಲಿನ ಆಡಿಟ್ ವರದಿಯನ್ನು ಜುಲೈ ತಿಂಗಳಲ್ಲಿ ಕಳುಹಿಸುವುದು.
- ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯ ಮಾಸಿಕ ಪ್ರಗತಿಯನ್ನು ನಿಗದಿತ ನಮೂನೆಗಳಲ್ಲಿ ಪ್ರತಿ ಮಾಹೆ 5ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ ವೆಬ್‌ಸೈಟ್ ಗೆ ಅಪ್‌ಲೋಡ್ ಮಾಡಿ ಪ್ರತಿಯನ್ನು ಸ್ವಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಲುಪುವಂತೆ ಕಳುಹಿಸಲು ಕೋರಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ರವಿಕುಮಾರ್**

ಸರ್ಕಾರದ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

